# ಗೋಲಿನ ಗೋಳು

(ನಗೆ ನಾಟಕ)

ರಚನೆ : ಡಾ|| ಎಸ್. ಕೇಶವಮೂರ್ತಿ

ಬಿ.ಎ.ಎಸ್‌ಸಿ., ಎಂ.ಎಸ್‌ಸಿ., (ಡಿ.ಲಿ)

ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತು

ಬೆಂಗಳೂರು

# ಎರಡು ಮಾತು

ಯಾರಿಗೇ ಆಗಲಿ ಒಂದಲ್ಲ ಒಂದು ಹವ್ಯಾಸ ಇದ್ದೇ ಇರುತ್ತದೆ. ಅದು ಆರೋಗ್ಯಕರ ಹವ್ಯಾಸವಾದರೆ ಅದನ್ನು ಸದುಪಯೋಗಪಡಿಸಿಕೊಳ್ಳುವ ಅವಕಾಶ ಸಿಕ್ಕುವುದು ಅದೃಷ್ಟವೇ ಸರಿ. ಆದರೆ ಹಾಗೆ ಎಲ್ಲರಿಗೂ ಸಾಧ್ಯವಾಗುವುದಿಲ್ಲ. ತಾವು ಇಚ್ಛಿಸುವ ಹವ್ಯಾಸಕ್ಕೆ ಅವಕಾಶ ಸಿಕ್ಕದಿದ್ದಾಗ ಆಕಾಂಕ್ಷೆ ಮಿತಿ ಮೀರಿ ಗೀಳಾಗಿ ಪರಿವರ್ತನವಾಗುತ್ತದೆ. ಆ ಗೀಳಿನಿಂದ ಬಳಲುವ ಮನುಷ್ಯನಿಗೆ ಬೇರೇನೂ ಬೇಕಾಗುವುದಿಲ್ಲ. ಐಸ್‌ಬರ್ಗ್ ಥಿಯರಿಯಂತೆ ಸಮಾಜದಲ್ಲಿ ಯಾವುದಾದರೊಂದು ಕಲೆಯಲ್ಲಿ, ಸಂಗೀತ ಸಾಹಿತ್ಯಗಳಲ್ಲಿ ಯಶಸ್ವಿಯಾಗಿ ಪ್ರಸಿದ್ಧರಾದವರು ಕೆಲವರಾದರೆ ಅದರ ಗೀಳಿನಿಂದ ಅವಕಾಶ ಸಿಗದೆ ವಿಫಲರಾದವರು ನೂರಾರು ಜನ. ಎಷ್ಟು ಜನರ ಆಶೆ ಆಕಾಂಕ್ಷೆಗಳು, ಪ್ರಯತ್ನಗಳು ನೀರಿನಲ್ಲಿ ಮಾಡಿದ ಹೋಮವಾಗಿದೆಯೊ? ಎಷ್ಟು ಜನರ ನಿಟ್ಟುಸಿರು ಶಬ್ದ ಸಾಗರದಲ್ಲಡಗಿದೆಯೊ?

ನಾಟಕದ ಪ್ರದರ್ಶನ ನೀಡಲು ಹಂಬಲಿಸುತ್ತಿದ್ದ ನಟರಾಜನ ನಾಟಕದ ಗೀಳು ಕೊನೆಗೆ ವ್ಯರ್ಥ ಪ್ರಯತ್ನವಾಗಿ ಗೋಳಾಗುತ್ತದೆ. ವ್ಯಥೆಯ ಕಥೆಯಾದರೂ ಲೇಖಕರು ಅಲ್ಲಲ್ಲಿ ನಗೆ, ತಿಳಿಹಾಸ್ಯ ಚಿಮ್ಮಿಸಿದ್ದಾರೆ. ಸಂಭಾಷಣೆಗಳಲ್ಲಿ ಲವಲವಿಕೆ ಇದೆ. ಡಾ. ಕೇಶವಮೂರ್ತಿ ತೀರ ಚಿಕ್ಕವಯಸ್ಸಿನಲ್ಲೇ ಸ್ನಾತಕೋತ್ತರ ಪದವಿ ಹಾಗೂ ಸಂಶೋಧಕ ಪದವಿಗಳಲ್ಲಿ ಚಿನ್ನದ ಪದಕ ಪಡೆದ ಪ್ರತಿಭಾವಂತರು. ಪಶುಸಂಗೋಪನಾ ಇಲಾಖೆಯಲ್ಲಿ ಉಪನಿರ್ದೇಶಕರಾಗಿ ತುಂಬ ಒಳ್ಳೆಯ ಹೆಸರು ಗಳಿಸಿದ್ದಾರೆ. ಸಾಹಿತ್ಯದಲ್ಲಿ ಸಹ ಕಥೆ, ಕವಿತೆ, ನಾಟಕಗಳನ್ನು ಬರೆದಿದ್ದಾರೆ. ಇವರ ಲೇಖನಿಯಿಂದ ಇನ್ನೂ ನೂರಾರು ಕೃತಿಗಳು ಹೊರಬರಲಿ. ನಾಡಿನ ಪ್ರಸಿದ್ಧ ಸಾಹಿತಿಯಾಗಿ ಮೆರೆಯಲಿ ಎಂದು ಹಾರೈಸುತ್ತೇನೆ.

ನಮ್ಮ ಪರಿಷತ್ತಿಗೆ ಈ ನಾಟಕವನ್ನು ಡಾ. ಕೇಶವಮೂರ್ತಿಯವರು ಬರೆದು ಕೊಟ್ಟಿದ್ದಕ್ಕಾಗಿ ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ತಿನ ಪರವಾಗಿ ಕೃತಜ್ಞತೆ ಸಲ್ಲಿಸುತ್ತೇನೆ.

**ನಿರುಪಮಾ**

# ಲೇಖಕನ ನುಡಿ

"ಗೀಳಿನ ಗೋಳು" ಒಂದು ಹಾಸ್ಯ ಪ್ರಹಸನ. ಇದರಲ್ಲಿ ನಾಟಕ ಆಡುವ ಆಡಿಸುವ ಗೀಳಿಗೆ ಸಿಲುಕಿಕೊಂಡವನೊಬ್ಬನ ಗೋಳು ಹೇಗಿರುತ್ತದೆ ಎಂಬುದರ ನಿರೂಪಣೆಯಾಗಿದ್ದು. ಹಾಸ್ಯದ ಹಿನ್ನೆಲೆಯಲ್ಲಿ ರಚಿಸಲಾಗಿದೆ.

ಈ ನಾಟಕವನ್ನು ರಚಿಸಿ ಸುಮಾರು ಒಂದು ವರ್ಷವೇ ಆಗಿದ್ದರೂ, ಕಾರಣಾಂತರಗಳಿಂದ ಪ್ರಕಟಣೆಯಾಗುತ್ತಿರುವುದು ಈಗ. ಈ ನಾಟಕವನ್ನು ಪ್ರಕಟಿಸಿದ ಕರ್ನಾಟಕ ಮಕ್ಕಳ ಸಾಹಿತ್ಯ ಪರಿಷತ್ ನವರಿಗೆ ನಾನು ಕೃತಜ್ಞ. ಹಾಗೆಯೇ ಈ ಹೊತ್ತಿಗೆಗೆ ಮುನ್ನುಡಿ ಬರೆದ ಖ್ಯಾತ ಲೇಖಕಿಯವರಾದ ಶ್ರೀಮತಿ ನಿರುಪಮಾ ರವರಿಗೆ ನಾನು ತುಂಬಾ ಆಭಾರಿಯಾಗಿದ್ದೇನೆ. ನಾಟಕ ರಚನೆಗೆ ಉತ್ತೇಜನ ನೀಡಿದ ನನ್ನ ಮಿತ್ರರಾದ ಶ್ರೀ ಆರ್. ಶಿವರಾಂರವರಿಗೂ ಅಂದವಾಗಿ ಮುದ್ರಿಸಿದ ಲೇಖಾ ಮುದ್ರಣದ ಮಾಲೀಕರಾದ ಶ್ರೀ ಟಿ ಕೆ. ತಮ್ಮಾಜಿಯವರಿಗೂ ನನ್ನ ವಂದನೆಗಳು.

ಡಾ|| ಎಸ್. ಕೇಶವಮೂರ್ತಿ

# ಗೀಳಿನ ಗೋಳು

**ಪಾತ್ರ ಪರಿಚಯ :—**

1. **ನಾಟಕದ ನಟರಾಜ್ :—** ಕಛೇರಿಯ ಪ್ರಥಮ ದರ್ಜೆ ಗುಮಾಸ್ತೆ, ನಾಟಕದ ಗೀಳು ಹಿಡಿದ ವ್ಯಕ್ತಿ.
2. **ಮ್ಯಾನೇಜರ್ ಮಹದೇವಪ್ಪ :—** ಕಛೇರಿಯ ಮ್ಯಾನೇಜರ್.
3. **ಕ್ಯಾಷಿಯರ್ ಕ್ಯಾತಯ್ಯ :—** ಕ್ಯಾಷಿಯರ್.
4. **ಫಸ್ಟ್ ಡಿವಿಜನ್ ಫಕೃದ್ದೀನ್ :—** ಪ್ರಥಮ ದರ್ಜೆ ಗುಮಾಸ್ತೆ.
5. **ಸೆಕೆಂಡ್ ಡಿವಿಜನ್ ಶಂಕ್ರಪ್ಪ :—** ಎರಡನೆ ದರ್ಜೆ ಗುಮಾಸ್ತೆ.
6. **ಟೈಪಿಸ್ಟ್ ತಾರಾ :—** ಲೇಡಿ ಟೈಪಿಸ್ಟ್.
7. **ಬಿಸ್ಕತ್ ಫ್ಯಾಕ್ಟ್ರಿ ಭೀಮರಾಯ :—** ನಾಟಕ ಆಡಲು ಆಯ್ಕೆಯಾದ ಒಬ್ಬ ವ್ಯಕ್ತಿ.
8. **ವೇಟ್ರನ್ ವೆಂಕಣ್ಣ :—** ದಿವಾಳಿ ಆದ ನಾಟಕದ ಕಂಪನಿಯ ನಟ.

(ಇದಲ್ಲದೆ ಇಬ್ಬರು ಆಗಂತುಕರು ಮತ್ತು ಒಬ್ಬ ಡಾಕ್ಟರ್)

**ಕಾಲ :—** ನವೀನ **ಸ್ಥಳ :—** ಒಂದು ತಾಲ್ಲೋಕ್ ಹೆಡ್‌ಕ್ವಾರ್ಟರ್

ಲೇಖಕ :— **ಡಾ|| ಎಸ್. ಕೇಶವಮೂರ್ತಿ,**
ಬಿ.ವಿ.ಎಸ್ಸಿ., ಎಂ.ಎಸ್ಸಿ (ಡೈರಿ).

## ದೃಶ್ಯ ೧

### (ಕಛೇರಿ)

[ಕಛೇರಿಯ ದೊಡ್ಡ ಕೊಠಡಿಯ ಮಧ್ಯದಲ್ಲಿ, ಮ್ಯಾನೇಜರ್. ಒಂದು ಬದಿಯಲ್ಲಿ ಕ್ಯಾಷಿಯರ್ ಮತ್ತು ನಟರಾಜ್. ಇನ್ನೊಂದು ಬದಿಯಲ್ಲಿ ಫಕ್ರುದ್ದೀನ್, ಶಂಕರಪ್ಪ ಮತ್ತು ತಾರ, ಟೇಬಲ್‌ಗಳ ಎದುರಿನಲ್ಲಿ ಕುಂಡಿಸಿ ದ್ದಾರೆ. ಟೈಪಿಸ್ಟ್ ಟೇಬಲ್ ಮೇಲೆ ಟೈಪ್‌ರೈಟರ್, ಇತರ ಕಾಗದಗಳು, ಇತರ ಟೇಬಲ್‌ಗಳ ಮೇಲೆ ಫೈಲ್‌ಗಳು ಇತ್ಯಾದಿ ಇವೆ. ನಟರಾಜ್ ಕುಳಿತಲ್ಲೇ ಏನೋ ಯೋಚಿಸುತ್ತಾ, ಕೈತಿರುಗಿಸುತ್ತಿದ್ದಾನೆ. ಎಲ್ಲರೂ ಇವನನ್ನು ಆಶ್ಚರ್ಯದಿಂದ ನೋಡುತ್ತಿದ್ದಾರೆ]

**ಮಹದೇವಪ್ಪ:—** ರೀ..... ನಟರಾಜ್......ಏನ್ರೀ ಹಾಗೇ ಒಬ್ರೇ ಯೋಚಿಸ್ತಾ ಕೈ ಆಡಿಸ್ತಾ ಇದೀರ ? (ನಟರಾಜ್‌ಗೆ ಕೇಳಿಸದಂತೆ, ಮೊದಲಿನಂತೇ ಇರಲು, ಮಹದೇವಪ್ಪ ಸಿಟ್ಟಿನಿಂದ) ರೀ......ನಟರಾಜ್..... ಏನ್ರೀ ಅದು..... ಹಾಗ್ಮಾಡ್ತಿದೀರಾ...... ಕೆಲ್ಸ ನೋಡ್ರಿ.

**ನಟರಾಜ್:—** (ಗಾಬರಿಯಿಂದ) ಆಂ..... ಆಂ..... ಆಯ್ತು ಸಾರ್..... ಸಾರಿ ಸರ್. (ಮುಂದಿದ್ದ ಪೇಪರನ್ನು ಎಳೆದುಕೊಂಡು ಅಂಕೆಗಳನ್ನು ಕೂಡುವನು) ಒಂಬತ್ತು..... ಒಂಬತ್ತು..... ಏಳು ..... ಹದಿನಾಲ್ಕು...... ಹದಿನಾಲ್ಕು... ಎಂಟು. . ಇಪ್ಪತ್ತೊಂದು,...... ಇಪ್ಪತ್ತೊಂದು.. . ಆರು

**ಮಹದೇವಪ್ಪ:—** ರೀ..... ರೀ.... ಸಿಲ್ಲಿ..... ಏನು ? ಒಂಬತ್ತು .

ಏಳು...... ಹದಿನಾಲ್ಕೇ ? ......ಯಾವೂರಲ್ರೀ..... ಸರಿ ಯಾಗಿ ಗಮನ ಇಟ್ಟು ಕೂಡ್ರಿ.

**ನಟರಾಜ್:—** ಕ್ಷಮಿಸ್ಸಿ ಸಾರ್..... ತಪ್ಪಾಯ್ತು...... ಒಂಬತ್ತು..... ಏಳು.. ಹದಿನಾರು..... ಹದಿನಾರು......ಎಂಟು..... ಇಪ್ಪತ್ತೊಂದು.....

**ಫಕ್ರುದ್ದೀನ್:—** ಹದ್‌ನಾರು......ಎಂಟು......ಇಪ್ಪತ್ತೊರಾ..... ಓ..... ಕೈಸೇ?

**ಶಂಕ್ರಪ್ಪ:—** ಫಸ್ಟ್ ಡಿವಿಜನ್ ಫಕ್ರುದ್ದೀನ್ ಸಾಹೇಬ್ರೇ,• ನಟ ರಾಜ್..... ಈ ಲೋಕದಲ್ಲಿ ಇಲ್ರೀ.

**ಮಹದೇವಪ್ಪ:—** ಯಾಕ್ರೀ...... ನ ಟ ರಾ ಜ್...... ಹುಷಾರಿಲ್ವೇನ್ರಿ ? ..... ಹುಷಾರಿಲ್ದೇ ಇದ್ರೆ...... ರಜಹಾಕಿ......ಮನೆಗಾದ್ರೂ ಹೋಗ್ರೀ.....

**ನಟರಾಜ್:—** ಹುಷಾರಾಗೇ ಇದೀನಿ..... ಎಲ್ಲೋ..... ಏನೋ...... ಯಾವ್ದೋ ಪ್ಲಾಟ್ನ... ಯೋಚ್ನೆ ಮಾಡ್ತಾ ಇದ್ದೆ ಸಾರ್.

**ಕ್ಯಾತಯ್ಯ:—** ಲೇ...... ನಟರಾಜ..... ಪ್ಲಾಟ್...... ಪ್ಲಾಟ್ ಅಂತ ಹೀಗೆ ತಲೆ ಕೆಡಸಿಕೊಂಡು ಕೂತ್ರೆ..... ನಿನ್ನ ಪ್ಲಾಟ್ ಇರ್ಲಿ ನಿನ್ನಫೇಟ್...... ಏನಾಗುತ್ತೇ..... ಯೋಚ್ನೆ ಮಾಡಿದೀಯಾ ?

**ನಟರಾಜ್:-** (ಪೆದ್ದು ಪೆದ್ದಾಗಿ)..... ಏನು ? ......ಏನಾಗುತ್ತೇ ?

**ಕ್ಯಾತಯ್ಯ:—** ಏನಾಗುತ್ತಾ? ..... ತಲೆಕೆಟ್ಟು ಮೆಂಟಲ್ ಹಾಸ್ಪೆಟಲ್‌ಗೆ ಅಡ್ಮಿಟ್ ಆಗಿ,.... ನಿನ್ನ ಫೇ ಟು.... ಫ್ಲ್ಯಾಟ್ ಆಗುತ್ತೆ.

(ನಟರಾಜ್ ಅವಮಾನಿತನಂತೆ, ಎರಡು ಕೈನೂ ತಲೇ ಮೇಲೆ ಇಡು ವನು. ಮಹದೇವಪ್ಪ ತನ್ನ ಸೀಟಿನಿಂದ ಎದ್ದು ಬಂದು ನಟರಾಜ್‌ನನ್ನು ಸಮಾಧಾನ ಮಾಡುತ್ತಾ.)

ಮಹದೇವಪ್ಪ ಬೇಜಾರಾಗ್ಬೇಡಿ ನಟರಾಜ್ . ನೀವಿನ್ನೂ ಚಿಕ್ಕ ವರು .. ಓದಿದೋರು. . ಮುಂದೆ ಒಳ್ಳೆ ಫ್ಯೂಚರ್ ಇರೋರು ನೋಡಿ . ಈ ನಾಟಕದ ಗೀಳೆಲ್ಲಾ ಬಿಟ್ಟು ಆರಾಮವಾಗಿರಿ . ಇಷ್ಟಕ್ಕೂ ಏನಾಯ್ತೂಂತ ಹಾಗೆ ತಲೆ ಕೆಡಿಸಿಕೊಂಡಿದೀರಾ.

ನಟರಾಜ್ :— (ಎದ್ದು ನಿಂತು) .. ಏನ್ಹೇಳ್ಲಿ ಸಾರ್ ? ನಮ್ಮ ರೂಂ ಹತ್ರ ಪತ್ರದೋರ್ನೆಲ್ಲಾ .. ಸೇರಿಸಿಕೊಂಡು ಒಳ್ಳೇ ನಾಟಕ ಮಾಡೋಣಾಂತ ಸಾಪ್ಸ ಮಾಡಿ ಏರ್ಪಾಡು ಮಾಡಿದ್ದೆ ಇನ್ನೇನು ಸ್ಕ್ರಿಪ್ಟ್ ಬರ್ಕೊಂಡು .. ಶುರುಮಾಡ್ಬೇಕೂ .. ಅನ್ನೋ ಅಷ್ಟರಲ್ಲೇ .. ಚ್ಚು ಚ್ಚು (ನಿಟ್ಟುಸಿರು ಬಿಡುವನು).

ಫಕ್ರುದ್ದೀನ್ ಬಾಪ್ ಮೆ ಕ್ಯಾ ಹುವಾ .. ನಟರಾಜೂ.

ಶಂಕ್ರಪ್ಪ:— ಇನ್ನೇನಾಗುತ್ತೇ ? .. ಯಾರೋ ಪಾರ್ಟ್ದಾರರು ಕೈಕೊಟ್ಟಿರಬೇಕೂ.

ನಟರಾಜ್ :— ಇಲ್ಲಪ್ಪ ನಮ್ಮ ನಾಟಕದ ಹೀರೋನೂ . ವಿಲನ್ನೂ ಯಾವ್ದೋ ಅವ್ರವ್ರ ಪರ್ಸನಲ್ ವಿಚಾರಕ್ಕೆ . ಚನ್ನಾಗಿ ಹೊಡ್ದಾಡಿ ಗಲಾಟೆ ಮಾಡ್ಕೊಂಡ್ರು.

ಕ್ಯಾತಯ್ಯ :- ವೆರಿಗುಡ್ ವೆರಿಗುಡ್ ... ಹಂಗಾದ್ರೆ ಅವ್ರು . ಈಗ ಇನ್ ರಿಯಾಲಿಟೀ ನಿಜ್ವಾದ ಶತ್ರುಗ್ಳು ಇನ್ನೇನ್ ಯೋಚ್ನೆ .. ನಿನ್ನಾಟ್ಕ ನ್ಯಾಚುರಲ್ಲಾಗಿ .. ಸಕ್ಸಸ್‌ಫುಲ್ಲಾಗಿ ಬರುತ್ತೆ.

ನಟರಾಜ್ :— ನಿನ್ನೆಲೆ ... ಇಬ್ರೂನ್ನೂ .. ಪೋಲೀಸ್ನೋರು ಹಿಡ್ಕೊಂಡ್ಹೋಗಿ ಕೇಸ್ ಬುಕ್ ಮಾಡಿದಾರೆ.

ಶಂಕ್ರಪ್ಪ :— ಅದಕ್ಕೇ ನಟರಾಜ್ ಸುಮ್ನೆ .. ಇವೆಲ್ಲಾ ಬಿಟ್ಟು ..

ಮ್ಯಾನೇಜರ್ ಹೇಳ್ದಾಗೆ ಆರಾಮ್ವಾಗಿದ್ದು .. ಒಂದು ಒಳ್ಳೆ ಹುಡ್ಗೀನ ನೋಡಿ . ಸಂಸಾರ ಮಾಡ್ಕೊಂಡಿರಿ

**ನಟರಾಜ್ :--** (ಸೀಟ್ನಿಂದ ಎದ್ದು ಮುಂದೆ ಬಂದು) ಲೇ ಸೆಕೆಂಡ್ ಡಿವಿಜನ್ ಶಂಕ್ರ (ನಾಟಕದ ಭಂಗಿಯಲ್ಲಿ) ಕಲೆ . ಅಂದರೆ .. ಏನೂಂತ ತಿಳ್ಕೊಂಡಿದ್ದೀಯೋ ?

**ಶಂಕ್ರಪ್ಪ :—** (ಮಧ್ಯೆ ಬಾಯಿ ಹಾಕಿ) ಕಲೆ ಅಂದ್ರೆ ಅದೇ ನಾನು ಹುಡುಗ್ನಾದಾಗ . ಮರಕೋತಿ ಆಟ ಆಡ್ತಾ ಆಡ್ತಾ ಇದ್ದಾಗ ಮರ್ದಿಂದ ಬಿದ್ದು ಗಾಯ ಆಗಿ ದೊಡ್ಡ ಕಲೆ ಆಯ್ತು ಅದನ್ನೆ ನಾನು ಇನ್ಶೂರೆನ್ಸ್‌ಗೆ ತೋರ್ಸಿರೋದು.

**ನಟರಾಜ್ :—** ನಿಸ್ತಲೆ (ಆವೇಶದಿಂದ) ರಸಾಭಾಸ ರಸಾಭಾಸ ಕೇಳ್ರಿ ಮ್ಯಾನೇಜರ್ ಮಹದೇವಪ್ಪನೋರೇ, ಕ್ಯಾಷಿಯರ್ ಕ್ಯಾತಯ್ಯ, ಫಸ್ಟ್ ಡಿವಿಜನ್ ಫಕೃದ್ದೀನ್ ಸಾಹೇಬ್ರೇ, ಸೆಕೆಂಡ್ ಡಿವಿಜನ್ ಶಂಕ್ರಪ್ಪ (ಲೇಡಿ ಟೈಪಿಸ್ಟ್ ಕಡೆ ನೋಡಿ) ಟೈಪಿಸ್ಟ್ ತಾರಾ ಅವ್ರೇ, (ಎಲ್ಲರೂ, ಸೀಟಿನಿಂದ ಎದ್ದು ಬಂದು ಸುತ್ತಲೂ ನಿಲ್ಲುವರು. ನಟರಾಜ್ ಸಂತೋಷದ ಸಂಭ್ರಮದಿಂದ) . ಕಲೆ ಅಂದರೆ .. ಮನಸ್ಸಿನಿಂದ ಅಂತರಾಳದಲ್ಲಿರುವ . ಮಧುರ, ಆವೇಶ, ಆಕ್ರೋಶ, ಸಂಕೋಚ, ಇತ್ಯಾದಿ ಭಾವನೆಗಳನ್ನು ವಿವಿಧ ರೂಪದಲ್ಲಿ ಪ್ರದರ್ಶಿಸುವುದೇ .. ಕಲೆ ಕಲೆಯು ಸಂಗೀತವಾಗಬಹುದು, ನೃತ್ಯವಾಗಬಹುದು ಚಿತ್ರಕಲೆಯಾಗಬಹುದು, ನಾಟಕವಾಗಬಹುದು .. ಅದರಲ್ಲೂ ನಾಟಕವು ಪಂಚ ಮಹಾಕಲೆಗಳಿಂದ ಸಮ್ಮಿಳನವಾಗಿರುವ . ಪಂಚಾಮೃತ . ಈ ಮಹೋನ್ನತ . ಕಲೆಗೋಸ್ಕರ ಹಲವಾರು ಕಲೋ

ಪಾಸಕರು ...ತಮ್ಮ ಪ್ರಾಣವನ್ನೇ ಅರ್ಪಿಸಿದ್ದಾರೆ . ಆದ್ದರಿಂದ .. ನಾನೂ ..

**ಕ್ಯಾತಯ್ಯ :-** (ಮುಷ್ಟಿ ಬಾಯಿ ಹಾಕಿ) ಆದ್ದರಿಂದ ನೀನೂ ಪ್ರಾಣಾರ್ಪಣೆ ಮಾಡ್ತೀಯಾ ? . ಮಾಡು .. ನಿನ್ಪ್ರಾಣ . ನೀನು ಅರ್ಪಣೆ . ಮಾಡ್ಕೊಳಕ್ಕೆ . ನಮ್ಮ ಯಾವ್ತರವ ಅಬ್ಜೆಕ್ಷನ್ನೂ ಇಲ್ಲ.

**ನಟರಾಜ್:-** ಸಿಲ್ಲೋ (ಮತ್ತೆ ನಾಟಕೀಯವಾಗಿ) ಆದ್ದರಿಂದ ನಾನೂ ... ಆ ಕಲಾದೇವಿಯ ಉಪಾಸನೆಯಲ್ಲಿ ತೊಡಗಿರುವ .. ಓರ್ವ ಕಲೋಪಾಸಕ .. ಇನ್ನು ನಾಟಕದ ಕಲೆ ಒಬ್ಬನಿಂದ ನೆರವೇರುವಂತಹುದಲ್ಲ . ಅದಕ್ಕೆ ಜನಗಳ .. ನಿಮ್ಮಂತಹವರ ಪೂರ್ಣ ಸಹಕಾರ ವಿರಬೇಕು . ಕಲಾಜ್ಞಾನ ಪ್ರತಿಯೊಬ್ಬನಲ್ಲೂ . ಒಂದಲ್ಲಾ . ಒಂದು ರೀತಿಯಲ್ಲಿ ಸುಪ್ತವಾಗಿ ಇತ್ತೆ ..ನಮ್ಮಂಥ ಕಲೋಪಾಸಕರ ಆದ್ಯಕರ್ತವ್ಯ .. ಅಂತಹವರಲ್ಲಿ ಸುಪ್ತವಾಗಿರುವ ಕಲೆಯನ್ನು.. ಬೆಳ ಕಿಗೆ ತರುವುದು. ಆದ್ದರಿಂದ ... ಆದ್ದರಿಂದ (ಸುತ್ತಲೂ ನೋಡುವನು)

**ಫಕ್ರುದ್ದೀನ್:** (ಮುಷ್ಟಿಬಾಯಿ ಹಾಕಿ) . ಡೈಲಾಗ್.... ಭೂಲ್ ಗಯಾ ... ಕ್ಯಾಜೀ ?

**ಶಂಕ್ರಪ್ಪ :-** ಆದ್ದರಿಂದ (ಅವನೂ ನಾಟಕೀಯವಾಗಿ) .. ಈಗ .. ನಮ್ಮ ನಾಟಕದ ನಟರಾಜ್‌ರವರು ಈ ಮಹೋನ್ನತ ಕಲಾವಿದರು .. ನಮ್ಮಿಂದ .. ಒಂದು ಉತ್ತಮ ನಾಟಕವನ್ನಾಡಿಸಿ .. ನಮ್ಮಲ್ಲಿರುವ . ಅದ್ರಲ್ಲೂ.... ನಮ್ಮ ಫಕ್ರುದ್ದೀನ್ ಸಾಹೇಬ್ರಲ್ಲಿರುವ ಸುಪ್ತ ಕಲೆಯನ್ನು (ಕೈತೋರಿಸುತ್ತಾ) ಹೊರಗೆಳೆಯುತ್ತಿದ್ದಾರೆ.

**ನಟರಾಜ್ :—** (ಮಾಮೂಲು ಧಾಟಿಯಲ್ಲಿ) ಯಾಕಾಗಬಾರ್ದೂ ? . ..

ಉಪಾಹಾರ್ಕ್ಕೆಗೆ .. ಸೀನೇ .. ಸೀನ್ ನೋಡು . ಎಷ್ಟು ಚೆನ್ನಾಗಿ ಡೈಲಾಗ್ ಹೇಳ್ದ.

**ಶಂಕ್ರಪ್ಪ** :— ಅಯ್ಯೋ.... ದೇವ್ರೇ ಬಂತಲ್ಲಪ್ಪ ಗ್ರಹಚಾರ.

**ನಟರಾಜ್** :— ಇನ್ನು ನಮ್ಮ ಮಹದೇವಪ್ಪನೋರ್ನ ನೋಡಿ . (ಎಲ್ಲರೂ ಮಹದೇವಪ್ಪನವರ ಕಡೆ ನೋಡುವರು) ಎಂಥ ಭವ್ಯ ನಿಲುವು ? .. ಏನುಗತ್ತು ? .. ಏನು ಗಾಂಭೀರ್ಯ ? (ಮಹದೇವಪ್ಪ ಗತ್ತಿನಿಂದ ಬೀಗು ವರು) . ನಮ್ಮ ಕ್ಯಾಷಿಯರ್ ಕ್ಯಾತಯ್ಯನ್ನ ನೋಡಿ . ಪ್ರತಿ ಮಾತ್ನಲ್ಲೂ ಎಂಥ .. ಹಾಸ್ಯ ಪ್ರಜ್ಞೆ ಏನ್ಸತೆ ?

**ಕ್ಯಾತಯ್ಯ** :- ಸಕ್ಕದ್ದೀನ್ .ತಾರಾ .. ವಿಚಾರ ಏನು ?

**ನಟರಾಜ್** :- ಸಕ್ಕದ್ದೀನ್ ಹೂಂ .. ಅವ್ರಗೆ ಅಭಿನಯವೇ ಬೇಡ ಅವ್ರು ಮಾತ್ನಾಡ್ತಾ ಇರೋದನ್ನ ಕೇಳ್ತಾ ಇದ್ರೇ .. ನೋಡ್ತಾ ಇದ್ರೆ .. ಅವೇ ಒಂದು ನಾಟ್ಕ ಇದ್ದಂಗಿರುತ್ತೆ .. ಇನ್ನು ಟೈಪಿಸ್ಟ್ ತಾರಾ .. ಏನು ಒಲವು ? . ಏನು ವೈಯ್ಯಾರ ? .ಹೀರೋಯಿನ್‌ಗೆ ಹೇಳಿ ಮಾಡಿಸಿದಂಥ ಅಂಗಸೌಷ್ಠವ.

**ಮಹದೇವಪ್ಪ** :— (ಹಣೆ ಚಚ್ಚಿಕೊಳ್ತಾ) ರೀ ಏನೋ ದೇವ್ರ ದಯ ಸಾಹೇಬ್ರು ರಜದಲ್ಲಿರೋದ್ರಿಂದ ಸರಿಹೋಯ್ತು .. ಇದೇನು ಆಫೀಸೋ .. ಏನು ? . ಅಂತೂ ನಟ ರಾಜ್ . ನಮ್ಮನ್ನೆಲ್ಲಾ ಸೇರ್ಸಿ .. ನಾಟ್ಕ ಆಡ್ಸ ಬೇಕೂಂತ ಇದೀರಾ ಅನ್ನಿ.

**ನಟರಾಜ್** :— ಇರೋದೇನು ? ... ಆಡ್ಸೇ ಆಡಿಸ್ತೀನಿ .. ನಮ್ಮ ಆಫೀಸಿನಲ್ಲಿರೋ, ಪ್ರತಿಯೊಬ್ಬರಿಗೂ, ಪ್ರತಿಯೊಂದು ಕಂಭ ..ಕಂಭಕ್ಕೂ .. ಟೇಬಲ್....ಟೇಬಲ್‌ಗೂ .. ಕಲಾಜ್ಞಾನ ಇದೆ ಅನ್ನೋದನ್ನ (ಸಭಿಕರ ಕಡೆ ಕೈ

ತೋರಿಸುತ್ತಾ) ಎಲ್ಲಾ ಮಹಾಜನರಿಗೂ ತೋರ್ಸೀ ತೋರಿಸ್ತೀನಿ.

**ಕ್ಯಾತಯ್ಯ :—** ನಟರಾಜ್ ನಾಳೆ ಫುಟ್‌ಬಾಲ್ ಮ್ಯಾಚ್ ಇದೆ .. ನಂ . ಟೀಮ್‌ನಲ್ಲಿ . ಒಬ್ಬ ಪ್ಲೇಯರ್‌ನ ಶಾರ್ಟ್ ಬಂದಿದೆ ನೀನು ನಾಳೆ ಅವ್ನ ಬದ್ಲು ಆಟಕ್ಕೆ ಬರ್ಬೇಕಪ್ಪ.

**ಶಂಕ್ರಪ್ಪ :—** ಏನ್ರೀ ಇದ್ದಕ್ಕಿದ್ದಹಾಗೆ ಅವ್ರೇನೋ . ಕಲೆ ವಿಚಾರವಾಗಿ ಮಾತಾಡ್ತಾ ಇದ್ರೆ ನೀವು ಫುಟ್ ಬಾಲ್ ವಿಚಾರ ತೆಗೀತೀರಲ್ರೀ... ಅಮೇಲೆ . ರಸಾ ಭಾಸ ಆಗುತ್ತೇಂತ ಹೇಳ್ತಾರೆ.

**ನಟರಾಜ್ :—** ಕ್ಯಾತೂ, ನಂಗೆ ಸ್ಪೋರ್ಟ್ಸ್ ಗಂಧವೇ ಇಲ್ಲಪ್ಪ ನಾನು ಫುಟ್‌ಬಾಲ್ ಆಡಕ್ಕಾಗತ್ಯೇ ? ನೀನೇ ಹೇಳು

**ಕ್ಯಾತಯ್ಯ :—** ಅಲ್ಲ ನಿಂಗೆ ಹೇಗೆ ಫುಟ್‌ಬಾಲ್ ಆಡೋದಕ್ಕೆ ಬರಲ್ವೋ . ಹಾಗೇನೇ ನಂಗೂ ನಾಟ್ಕ ಆಡಕ್ ರಲ್ಲಪ್ಪ.

**ನಟರಾಜ್ :.** ಅದೇ . ನೀನು ತಪ್ಪು ತಿಳ್ಕೊಂಡಿರೋದು. ಕ್ರೀಡೆಗೆ (ತೋರಿಸುತ್ತಾ) ಬಾಡಿಬೇಕು .. ನಾಟ್ಕಕ್ಕೆ ಬಾಯಿ, ಕೈ ಸಾಕು. ಕ್ರೀಡೆಗೆ ಫಿಸಿಕಲ್‌ಸ್ಟ್ರೆಂಗ್ತ್ ಬೇಕು . ನಾಟ್ಕಕ್ಕೆ ಮೆಂಟಲ್ ಎಫರ್ಟ್ಸ್ ಸಾಕು.

**ಫಕೃದ್ದೀನ್ :—** ಹೌದು ಕ್ಯಾತಪ್ಪ ನಟರಾಜ್ ಹೇಳೋದು ಬರಾಬರ್ . ಇದೆ.

**ಕ್ಯಾತಯ್ಯ :—** ಹಾಗಾದ್ರೆ . ನೀವೂ ನಾಟ್ಕ ಮಾಡಬೇಕೂ ಅಂತ ಇದೀರ ? ಅಲ್ರಿ ನಿಮ್ಗೆ ಕನ್ನಡ ಸರ್ರ್ಯಾಗಿ ಮಾತಾಡೋದಕ್ಕೇ ಬರಲ್ಲ.

**ಫಕೃದ್ದೀನ್ :—** ಏನೂ ನಮ್ಗೊಳ್ಕೆ ಕನ್ನಡ ಬಾನೆ ಬರಾಕಿಲ್ಲಾ?

**ನಟರಾಜ್** :— ಏನು ಕ್ಯಾತಯ್ಯ ನೀಹೇಳೋದು ? ಕರೀಂಖಾನ್ರು ... ಗೊತ್ತಿಲ್ವೇ ಕನ್ನಡದಲ್ಲಿ ಎಷ್ಟು ಚೆನ್ನಾಗಿ ಸಾಹಿತ್ಯ ರಚಿಸ್ತಾರೆ ಎನ್ನತಿ ?

**ಕ್ಯಾತಯ್ಯ** :— ಗೊತ್ತಿಲ್ದೆ ಏನಯ್ಯ ? .. ಆದ್ರೆ ಇವ್ರು (ಫಕ್ರುದ್ದೀನ್ ಕಡೆ ಬೆರಳು ಮಾಡಿ) ಕರೀಂಖಾನ್ ಅಲ್ವಲ್ಲಪ್ಪ ಬರೀ ಫಕ್ರುದ್ದೀನ್ ಸಾಹೇಬ್ರು.

**ನಟರಾಜ್** :— ಅಲ್ದೆ ಇದ್ರೇನಂತೆ ? ಮನಸ್ಸು, ಶ್ರದ್ಧೆ ಇದ್ರೆ.... ಯಾವ್ದು ಕಷ್ಟ ಇಲ್ಲ . ಮನಸ್ಸಿದ್ದಲ್ಲಿ ಮಾರ್ಗ ಇದ್ದೇ ಇರುತ್ತೆ.

**ಮಹದೇವಪ್ಪ** :— (ಗಡಿಯಾರದ ಕಡೆ ನೋಡಿಕೊಂಡು) . ಅಯ್ಯೋ ಆಗ್ಲೆ ಒಂದೂವರೆ ಗಂಟೆ ಆಯ್ತು ಬನ್ರಪ್ಪ ಲಂಚ್‌ಗೆ ಹೋಗೋಣ ಇವತ್ತು ಬೆಳಿಗೆ ಎಲ್ಲಾ ಇದೇ . ಕೆಲ್ಸ ಆಯ್ತು ಇಸ್ಪೀಟಿನ ಸಮಾಚ್ಛ . ನಾಟ್ಕದ ಗೀಳು ಶುರುವಾಗುತ್ತೆ ಅಷ್ಟೆ ಬನ್ನಿ . ಬನ್ನಿ .

(ಎಲ್ಲರೂ ಅವರವರ ಕ್ಯಾರಿಯರ್ ಚೀಲ ಹಿಡಿದುಕೊಂಡು ಹೊರಡುವರು. ನಟರಾಜ್ ಮಾತ್ರ ಯೋಚಿಸುತ್ತಾ ನಿಲ್ಲುವನು. ತಾರಾ ಕ್ಯಾರಿಯರ್ ಬಟ್ಟು ತೆಗೆದು ಟೇಬಲ್ ಮೇಲೆ ಇಡುವಳು. ನಟರಾಜ್ ಮತ್ತು ತಾರಾ ಬಿಟ್ಟು ಮಿಕ್ಕೆಲ್ಲರೂ ಹೊರಗೆ ಹೋಗುವರು)

**ನಟರಾಜ್** :— (ತಾರಾಗೆ) ತಾರಾ ಅವ್ರೆ ಸ್ವಲ್ಪ ಹೀಗೆ ತಿರ್ಗಿ .

**ತಾರಾ** :— (ಕಕ್ಕಾ ಬಿಕ್ಕಿಯಾಗುತ್ತಾ ಒಂದು ಸಾರಿ ಮೇಲೆ ನೋಡಿ ಮತ್ತೆ) . ಏಕ್ಸಾರ್ ಜಾತೆಯಿಂದ ..

ಏನಾದ ಕಸ ಬಿತ್ತೇ ಮೈ ಮೇಲೆ ?

**ನಟರಾಜ್ :—** (ಆಶ್ಚರ್ಯದಿಂದ) ... ಏನೂ.... ಗೊತ್ತಿಲ್ವಲ್ಲ.

**ತಾರಾ :-** ನನ್ನ ಮದ್ವೆ ಗೊತ್ತಾಗಿದೆ ಸಾರ್.... ನಮ್ಮೋರು ಮದ್ರಾಸ್‌ನಲ್ಲಿ ಇಂಜಿನೀಯರ್ ಆಗಿದ್ದಾರೆ. ನಾನು ಬರೋ ಫಸ್ಟ್‌ನಿಂದ ಕೆಲ್ಸಕ್ಕೆ ಬರೋದಿಲ್ಲ .. ರೆಸಿಗ್ನೇಷನ್.... ಆಗ್ಲೇ ಕೊಟ್ಟಾಗಿದೆ.... ನೀವೆಲ್ಲಾ ಸೇರಿ .. ಒಂದು ನಾಟ್ಕ ಆಡಿ ಸಾರ್ .. ವಿಶ್‌ಯು ಆಲ್ ಸಕ್ಸಸ್...

**ನಟರಾಜ್ :—** (ಖಿನ್ನ ವದನನಾಗಿ) ಹೌದೇ .. ಸರಿ ನನ್ನ ಆಶಾ ಗೋಪುರ ಕಳಚಿಬಿತ್ತು.

(ಅಷ್ಟರಲ್ಲಿ ಲಂಚ್‌ಗೆ ಹೋದವರೆಲ್ಲರೂ ಹಿಂದಿರುಗುವರು)

**ಕ್ಯಾತಯ್ಯ :—** ಕಳಚಿ ಬೀಳ್ತಿಲ್ಲವಯ್ಯ.... ಬೀಳೋ ಅಷ್ಟ್ರಲ್ಲೇ ನಾವೆಲ್ಲಾ .. ಹಿಡ್ಕೊಂಡ್ವಿ....

(ಇವರ ಮಾತು ಅರ್ಥವಾಗದೇ .. ನಟರಾಜ್ .. ಕಕ್ಕಾಬಿಕ್ಕಿಯಾಗುವನು)

**ಮಹದೇವಪ್ಪ** ಹೌದು.... ನಟರಾಜ್.... ನಿಮ್ಮ ಉತ್ಸಾಹ.... ನಿಮ್ಮ ಕಲೆಯ ಗೀಳು.... ಎಲ್ಲಾ ನೋಡಿ ... ನಾವೆಲ್ಲಾ ಸೇರಿ, ನಾವೂ ಒಂದು ನಾಟಕ ಏಕೆ ಮಾಡಬಾರ್ದು ಅಂತ, ಈಗ್ತಾನೇ.... ನಾವೆಲ್ಲಾ ಕೂತು ... ಡಿಸೈಡ್ ಮಾಡಿದ್ವಿ ... ಒಂದ್ನಾಟ್ಕ ಖಂಡಿತ ಆಡೋಣ .. ಆದ್ರೆ ನಾವೆಲ್ಲಾ ನಾಟ್ಕ ಆಡಕ್ಕೆ ಬರ್ದೇ ಇರೋದು.... ಟ್ರೈನ್‌ಅಪ್ ಮಾಡೋ ಭಾರ ನಿಮ್ದು.

**ಶಂಕ್ರಪ್ಪ :—** ಹೌದು.... ಮಹದೇವಪ್ಪನವರು ಹೇಳ್ದಾಗೆ ನಾವೆಲ್ಲಾ.... ಇಮ್ಮೆಚ್ಯೂರ್ಸ್.

**ಕ್ಯಾತಯ್ಯ** ನಿನ್ನ್ರಖ....ಇವ್ನ್ರೆಚ್ಯೂರ್ಸ್ ಅಲ್ವೋ ... ಅಮೆಚೂರ್ಸ್ ಅನ್ನು....

**ನಟರಾಜ್** ಹೌದೇ.... ನಿಮ್ಮ ಮಾತು ಕೇಳಿ.... ಬಾದಾಮಿ ಹಾಲ್ಕುಡ್ದು, ಟ್ರಿಪಲ್ ಫೈವ್ ಸಿಗರೇಟು ಸೇದಿದಷ್ಟು ಸಂತೋಷ ಆಯ್ತು. ಥ್ಯಾಂಕ್ಸ್ ಫಾರ್ ಆಲ್.... ಥ್ಯಾಂಕ್ಯೂ.

**ತಾರಾ :—** ನನ್ನೂ.. ಪಾರ್ಟ್ ಮಾಡೂ... ಅಂತ.... ಇಷ್ಟೊತ್ತೂ ಹೇಳ್ತಾ ಇದ್ರು ... ನಾನು ರೆಸಿಗ್ನೇಷನ್ ಕೊಟ್ಟಿರೋ ವಿಚಾರ ತಿಳ್ದು. ಪೆಚ್ಚಾದ್ರು ಪಾಪ.

**ಫಕೃದ್ದೀನ್ :—** ಅಂಗಾರೆ ಇವತ್ನಿಂದ .. ಇಸ್ಟಾರ್ಟ್ ಮಾಡೋಣ.

**ನಟರಾಜ್ :—** ಇವತ್ತು ಬುಧವಾರ ... ನಾಳೆ ಗುರುವಾರ... ಒಳ್ಳೇ ದಿನ ..ಸಾಯಂಕಾಲ 5-30ಕ್ಕೆ ಸರಿಯಾಗಿ ಎಲ್ರೂ.... ಇಲ್ಲೇ ಸೇರೋಣ. ನಿಮ್ಮ ಹತ್ರ ಯಾವ್ದಾದ್ರೂ ಡೈಲಾಗ್ ಓದ್ಸಿ, ಆಮೇಲೆ ಪಾರ್ಟ್ಸ್, ಪ್ಲಾಟು.... ಸೆಲೆಕ್ಟ್ ಮಾಡೋಣ ... ಹೇಗಿದ್ರೂ ನನ್ನ ಬ್ಯಾಗ್‌ನಲ್ಲಿ ಸದಾ ಒಂದೆರಡು ನಾಟಕದ ಪುಸ್ತಕಗಳು ಇದ್ದೇ ಇರುತ್ವೆ.

**ಮಹದೇವಪ್ಪ :—** ಓಕೆ,.... ಇನ್ನಾಕು .. ಕೆಲಸ ನೋಡೋಣ ಬನ್ನಿ.

(ಎಲ್ಲರೂ ಅವರವರ ಟೇಬಲ್ ಬಳಿಗೆ ಬಂದು ಆಫೀಸ್ ಕೆಲಸದಲ್ಲಿ ಮಗ್ನರಾಗುವರು)

**(ತೆರೆ ಸರಿಯುವುದು)**

# ದೃಶ್ಯ ೨

## (ಕಛೇರಿ ದೃಶ್ಯ)

(ಕೈಗಡಿಯಾರವನ್ನು ನೋಡಿ ಮ್ಯಾನೇಜರ್ ಮಹದೇವಪ್ಪ, ಕ್ಯಾರಿಯರ್ ಬ್ಯಾಗ್ ಎತ್ತಿಕೊಂಡು, ಫೈಲುಗಳನ್ನೆಲ್ಲಾ ಮಗ್ಗುಲಿಗೆ ಜೋಡಿಸುತ್ತಾ)

**ಮಹದೇವಪ್ಪ** :— (ಆಕಳಿಸುತ್ತಾ) ಐದೂವರೆ ಆಯ್ತು. ಇವತ್ತಿನ ಕೆಲ್ಸ ಮುಗ್ದ್ಹೋಗಾಯ್ತು.

**ತಾರಾ** :— (ಕ್ಯಾರಿಯರ್ ಚೀಲ, ವ್ಯಾನಿಟಿ ಬ್ಯಾಗ್, ಕೈಗೆ ತೆಗೆದುಕೊಂಡು) ಹಾಗಾದ್ರೆ . ನಾನಿನ್ನು ಬರ್ತೇನೆ ಸಾರ್ (ನಿಷ್ಕ್ರಮಣ)

[ಇತರರು ತಮ್ಮ ತಮ್ಮ ಕೈ ಚೀಲಗಳನ್ನು ತೆಗೆದುಕೊಂಡು ಹೊರಡಲು ಅನುವಾಗುವರು. ಫಕ್ರುದ್ದೀನ್ ಮಾತ್ರ ಹಾಗೆಯೇ ಕುಳಿತಿರುವನು]

**ನಟರಾಜ್** : - (ಸೀಟಿನಿಂದ ರಭಸದಿಂದ ಎದ್ದು ಬಂದು) ಅವ್ರು .. ಹೋದ್ರೂಂದ್ರೆ ನೀವೆಲ್ಲಾ ಯಾಕ್ರಯ್ಯ ಹೋಗ್ತೀರಾ? ಏನು.... ಆಗ್ಲೇ ನಾಟ್ಕದ ವಿಚಾರ ಮರ್ತೇ ಹೋಯ್ತೆ ? ... ನಿನ್ನೆ ಏನ್ ಮಾತನಾಡ್ಕೊಂಡಿದ್ವಿ ?

**ಮಹದೇವಪ್ಪ** (ಜ್ಞಾಪಿಸಿಕೊಳ್ಳುತ್ತಾ) ಹೌದಲ್ವೇ ... ಸಾರಿ ನಟರಾಜ್ ... ಮರ್ತೇಹೋಗಿತ್ತು (ಕ್ಯಾರಿಯರ್‌ನ್ನು ಪುನಃ ಮೇಜಿನ ಮೇಲಿಟ್ಟು ಕೂಡುವರು)

**ಕ್ಯಾತಯ್ಯ** :— ಛೆ ಛೇ.... ಎಂಥಾ ಕೆಲ್ಸ ಆಗ್ಹೋಯ್ತು ? ನಟ್ರಾಜು ... ನಾಳೆ ಸೇರಿದ್ರೆ ಆಗೋಲ್ವೇನಯ್ಯ. .. ನಂಗೂ ಮರ್ತೇಹೋಗಿತ್ತು.... ನನ್ನ್ ಮಿಸೆಸ್‌ಗೆ.... ಸಿನಿಮಾಕ್ಹೋಗೋಣ ಅಂತ.... ಪ್ರೋಗ್ರಾಂ ಹಾಕಿದ್ದೆ ಕಣಯ್ಯ ... ಪ್ಲೀಸ್ ನಾಳೆ ಸೇರೋಣಪ್ಪಾ.

**ನಟರಾಜ್ :-** ಏನ್ಕ್ಯಾತಯ್ಯ ನಿಂದು .. "ಪ್ರಥಮ ಚುಂಬನಂ ದಂತ ಭಗ್ನಂ" ಅನ್ನೋ ಹಾಗೆ, ಪ್ರಥಮದಲ್ಲೇ ವಿಘ್ನ ಆದ್ರೆ ಹೇಗಯ್ಯಾ ?.... ಇವತ್ತು, ದಿನ, ವಾರ, ತಿಥಿ .. ನಕ್ಷತ್ರ .. ಎಲ್ಲಾ ಚೆನ್ನಾಗಿದೆ. (ತಲೆ ಆಡಿಸುತ್ತಾ) ಇವತ್ತು ಆಗ್ಲೇಬೇಕು.

**ಕ್ಯಾತಯ್ಯ :—** ಸದ್ಯಪ್ಪ.... ನಿಂಗ್ಯಾಕೆ ಬೇಜಾರು .. ಇಪ್ಪತ್ತಿಂಪ ಟೈಂ ಕೊಡು.... ಮನೆಯೋರ್ಗ್ಳೇಳಿ ಬಂದ್ಬಿಡ್ತೀನಿ.

**ಶಂಕ್ರಪ್ಪ :—** ಬೆಳಗ್ನಿಂದ ಕೂತೂ .. ಬರ್‍ದೂ.... ಬರ್‍ದೂ.. ಸಾಕಾಗಿದೆ ... ಕ್ಯಾತಯ್ಯ ಬರೋಹೊತ್ಗೆ.... ಕಾಫಿ ಕುಡ್ಕೊಂಡು ಬರೋಣ.

**ನಟರಾಜ್ :—** ಒಳ್ಳೆ.... ಜ ನ್ರ ಯ್ಯ ... ನೀವು .. ಒಬ್ಬೊಬ್ರು ಒಂದೊಂದು ಹೇಳಿ....(ಫಕೃದ್ದೀನ್ ಕಡೆ ಬೇಸರದಿಂದ ತಿರುಗಿ) ನಿಮ್ದೇನ್ಹೇಳಿ.... ಸಾಹೇಬ್ರೆ ?

**ಫಕೃದ್ದೀನ್ :-** ನಂಗೆ.... ಇವತ್ತು ... ನಾಟ್ಕಾದ್ದು ... ದಿನ ಅಂತ .. ಬರೋಬರ್ ..ಗ್ಯಾಪ್ಕ ಇದೆ.... ನಾ .. ರೆಡಿ....

**ಮಹದೇವಪ್ಪ** ನೋಡ್ರಿ....ನಟ್ರಾಜ್ .. ಶಂಕ್ರಪ್ಪ ಹೇಳೋಹಾಗೆ .. ಕ್ಯಾತಯ್ಯ ವಾಪಸ್ ಬರೋಹೊತ್ಗೆ.... ಎ ಲ್ಲಾ ಕಾಫಿಗೆ ಹೋಗಿ ಬರೋಣ.... ನಡೀರಿ....

**ನಟರಾಜ್ :—** ನೀವೆಲ್ಲಾ ಹೋಗಿಬನ್ನಿ.... ನಾನೂ ಅಷ್ಟೊತ್ಗೆ.... ಕೆಲ್ವು ಡ್ರಾಮ ಪುಸ್ತಕಗಳನ್ನು ನೋಡಿ ... ಟ್ರಯಲ್ಸ್‌ಗೆ.... ಡೈಲಾಗ್ಸ್‌ನ ಸೆಲೆಕ್ಟ್ ಮಾಡಿ ಇಟ್ಟಿರ್ತೀನಿ....

(ಎಲ್ಲರೂ ಕಾಫಿಗೆ ಹೋಗುತ್ತಿರಲು)

**ನಟರಾಜ್ :—** ಬೇಗ್ಬಂದ್ಬಿಡಿ.... ಲೇಟ್ ಮಾಡ್ಬೇಡಿ.... (ಚೀಲದಿಂದ, ಹಲವು ಪುಸ್ತಕಗಳನ್ನು ತೆಗೆದುಕೊಂಡು, ಟೇಬಲ್ ಮೇಲೆ ಹರಡಿಕೊಂಡು, ಕೆಲವು ಪುಸ್ತಕಗಳಲ್ಲಿ ಡೈಲಾಗ್ಸ್

ಓದಿಕೊಂಡು, ಇನ್ನೊಂದು ಪೇಪರಿನಲ್ಲಿ, ಗುರುತು ಹಾಕಿಕೊಳ್ಳುತ್ತಾ)

(ಸ್ವಗತ) ಮಹದೇವಪ್ಪ.... ಯಾವ ರೋಲ್‌ಗೆ ಫಿಟ್ ಆಗ್ತಾರೆ?.. ಆಂ .. ಕರೆಕ್ಟ್.. ಪೌರಾಣಿಕವಾದ್ರೆ.... ಭೀಮ .. ದುರ್ಯೋಧನ, ಕೀಚಕ, ರಾವಣ ಇತ್ಯಾದಿ.. ಸಾಮಾಜಿಕವಾದ್ರೆ...... ಯಜಮಾನನ ಪಾರ್ಟ್‌ಗೆ... ಸಾಹ್ಕಾರನ ಪಾರ್ಟ್‌ಗೆ ಲಾಯಕ್ಕು.... ಆದ್ರೆ...... ಕೆಪ್ಯಾಸಿಟಿ ಹೇಗಿದೆಯೋ? ಹೂಂ, ನೋಡೋಣ.

ಇನ್ನು ಕ್ಯಾತಯ್ಯ...... ಶುದ್ಧ...... ಹುಡುಗ ಮುಂಡೇದು. ಸ್ವಲ್ಪಾನೂ ಸೀರಿಯಸ್‌ನೆಸ್ಸೇ ಇಲ್ಲ...... ಆದ್ರೂ ಹಾಸ್ಯವಾಗಿ ಮಾತ್ನಾಡ ಬಲ್ಲ ಅವನ್ಗೆ ಅಂಥದ್ದೇ ರೋಲ್ ಸೆಲೆಕ್ಟ್ ಮಾಡ್ಬೇಕು.

ಶಂಕ್ರಪ್ಪಂಗೇನ್ಮಾಡೋದು? ... ಸ್ವಲ್ಪ ದಬಾಯ್ಸಿಹೇಳಿದ್ರೆ.... ಕೇಳೋಂತೋನು .. ಹೀರೋ ಪಾರ್ಟ್‌ನೇನೋ ಕೊಡಬಹುದು .. ಆದ್ರೆ ಚೆನ್ನಾಗಿ ಟ್ರೈನ್‌ಅಪ್ ಮಾಡಬೇಕು ಅದೆಲ್ಲಾ ಸರಿ .. ಈ ಫಕ್ರುದ್ದೀನ್‌ಗೆ ಏನು ಮಾಡೋದು? ... ಪುಣ್ಯಾತ್ಮಂಗೆ...... ಕನ್ನಡ ಮಾತಾಡಕ್ಕೇ ಬರಲ್ಲ ... ಆದ್ರೆ.... ತುಂಬಾ ಒಳ್ಳೇ ಪ್ರಾಣಿ...... ಇವರೆಲ್ಲರಿಗಿಂತ್ಲೂ.... ನಾಟ್ಕ ಮಾಡ್ಬೇಕು ಅನ್ನೋ ಆಸೆ,....ಶ್ರದ್ಧೆ ಇದೆ.... ಪಾಪ .. ಯಾವ್ದಾದ್ರೂ.... ಫಿಟ್ ಆಗೋಂಥ ಪಾರ್ಟ್‌ಕ್ರಿಯೇಟ್ ಮಾಡಿದ್ರಾಯ್ತು.

ಫ್ಯಾನ್ ಪಾರ್ಟಿಗೆ ಯಾರೂ?.... ಸರಿ ಪುಟ್ಟಮಾದ ಇದಾನೆ.... ಅವನೂ ಹಳ್ಳಿ ನಾಟ್ಕಗಳಲ್ಲಿ ಪಾರ್ಟ್ ಮಾಡಿ ಅಭ್ಯಾಸ ಇದೆ.... ಆದ್ರೆ...... ಹಾಳಾ

ದೋನು.... ಒಂದು ತಿಂಗ್ಳು.... ಇ.ಎಲ್ .. ಹಾಕಿದ್ದಾನೆ ... ಚ್ಯು . ಪಾರ್ಟ್ ಕೊಟ್ರೇಲಿ .. ಕೆಲಸಕ್ಕೆ ಬರ್ದೇ ಇದ್ರೇನಂತೆ ? ಪ್ರಾಕ್ಟೀಸ್‌ಗೆ ಬರಬಹ್ದು.

ಹಾಳಾದ ತಾರ ಕೈ ಕೊಟ್ಲಲ್ಲ ಹೀರೋಯಿನ್‌ಗೇನಪ್ಪಾ ಗತಿ ?

(ತಕ್ಷಣ ಜ್ಞಾಪಿಸಿಕೊಂಡು, ಕೈಗಡಿಯಾರ ನೋಡಿ ನಂತರ...... ನಿಧಾನವಾಗಿ ಸಿಗರೇಟ್ ಹಚ್ಚುತ್ತಾ)...... ಇದೇನು ? ಹೋಗಿ ಅರ್ಧ ಗಂಟೆ ಆದ್ರೂ ಒಬ್ರೂ ಪತ್ತೇನೇ ಇಲ್ವಲ್ಲಾ ? ಒಬ್ರಿಗಾದ್ರೂ ಟೈಂ .. ಸೆನ್ಸೇ..... ಇಲ್ವಲ್ಲಾ ?

(ಹೊರಗಡೆ ಮಾತಾಡಿಕೊಂಡು ಬರುವ ಶಬ್ಧ ಕೇಳಿ)

.....ಓ ..ಬರ್‍ತಿರೋಹಾಗಿದೆ .. ಬರ್‍ಲಿ ಒಬ್ಬೊಬ್ರಾಗಿ ಟ್ರಯಲ್ಸ್‌ಗೆ ಕರ್ದು ನೋಡ್ಬೇಕು.

(ಎಲ್ಲರೂ ಪ್ರವೇಶಿಸಿ, ಅವರವರ ಜಾಗಕ್ಕೆ ಹೋಗುವರು)

**ಮಹದೇವಪ್ಪ :—** ಅಯ್ಯೋ..... ನಿನ್ಗೆ ಕಾಫೀನೇ ಇಲ್ದ್ಹಾಗಾಯ್ತು. ಇಲ್ಲೇ ತರ್‍ಸೋಣಾ ಅಂದ್ರೆ.. ಪುಟ್ಟಾದಾನೂ ರಜ.

**ನಟರಾಜ್ :—** ಇರ್‍ಲಿ ಬಿಡಿ ಸಾರ್.... ನೀವು ಹಿಂದೆ ಯಾವಾಗ್ಲಾದ್ರೂ ನಾಟ್ಕದಲ್ಲಿ ಪಾರ್ಟ್ ಮಾಡಿದ್ರಾ ?

**ಮಹದೇವಪ್ಪ :—** ಬಹ್ಳ.... ಬಹ್ಳ.. ಹಿಂದೆ..... ನಮ್ಮೂರಲ್ಲಿ ನಾಟ್ಕ ಆದಾಗ ..ಒಂದು ನಾಟ್ಕದಲ್ಲಿ .. ಒಂದೈದು ನಿಮಿಷ ಬರೋದು...... ಅದೇ, ರಾಜರಿಗೆ "ಪರಾಕ್.... ಪರಾಕ್" ಅಂತ ಕೂಗೋ ರೋಲ್ ಮಾಡಿದ್ದೆ ಅಷ್ಟೆ.

**ನಟರಾಜ್ :—** ಪರ್‍ವಾಗಿಲ್ಲ ಬಿಡಿ.... ಈಗ ಒಳ್ಳೇ ಪಾರ್ಟೇ ಮಾಡಿವ್ರಂತೆ. (ಪುಸ್ತಕದಿಂದ ಒಂದು ಹಾಳೆ ತೆಗೆದು ಮಹದೇವಪ್ಪನಿಗೆ ಕೊಡುತ್ತಾ) ನೋಡಿ.... ಇದು.....

ಒಂದು.... ಪೌರಾಣಿಕ ನಾಟಕದ ದೃಶ್ಯ.... ಪಾರ್ಟು ದುರ್ಯೋಧನನಂದು...... ಭೀಮನನ್ನ ಅಪಹಾಸ್ಯ ಮಾಡಿ ... ಹೇಳ್ಬೇಕಾಗಿರೋದು.... ಎಲ್ಲಿ...... ಹೇಳಿ.... ಹ್ಯಾಗೆ ಹೇಳ್ತಿರೋ ನೋಡೋಣ.

**ಮಹದೇವಪ್ಪ** (ಜೇಬಿನಿಂದ ಕನ್ನಡಕ ತೆಗೆದು, ಕಣ್ಣಿಗೆ ಹಾಕಿ, ಹಾಳೆಯನ್ನು ಹಿಡಿದು, ಒಂದು ಸಾರಿ ಮೆಲ್ಲನೆ ಓದಿಕೊಂಡು ನಂತರ, ಸ್ವಾಭಾವಿಕವಾಗಿ ನಗುತ್ತಾ) ಅಲ್ರೋ...... ಭೀಮ ... ಗದಾಯುಧ್ಧ ಅಂದ್ರೆ... ಗಾಡಿ ಗಟ್ಲೆ......ಊಟಾ ಮಾಡ್ದಾಗೆ ಅಂದ್ಕೊಂಡಾ?

**ನಟರಾಜ್ :—** ಹಾಗಲ್ಲಾ ಸಾರ್.... ಹೀಗೆ (ನಾಟಕೀಯವಾಗಿ ದೊಡ್ಡ ಸ್ವರದಲ್ಲಿ) ಎಲೆ .. ಎಲವೋ ... ಭೀಮ..... ಗದಾಯುಧ್ಧವೆಂದರೆ, ಗಾಡಿಗಟ್ಟಲೆ ಊಟ ಮಾಡಿದಂತೆ ಎಂದು ತಿಳಿದಿರುವೆಯಾ ?

**ಮಹದೇವಪ್ಪ** (ನಟರಾಜನನ್ನು ಅನುಕರಿಸಿ) ಎಲೆ ಎಲೆವೋ ಭೀಮ...... ಗದಾಯುದ್ಧವೆಂದರೆ .. ಗಾಡಿಗಟ್ಟಲಿ ಊಟ ಮಾಡಿದಂತೆ ಎಂದು ತಿಳಿದಿರುವೆಯಾ ?

**ನಟರಾಜ್ :—** ಪರವಾಗಿಲ್ಲ.... ಸ್ಲೈಟ್ ಇಂಪ್ರೂವ್‌ಮೆಂಟ್... (ಶಂಕ್ರಪ್ಪನ ಕಡೆ ತಿರುಗಿ) ಲೇ ಶಂಕ್ರ ನೀನು ಬಾ.... (ಶಂಕರ್ ಬರುವನು. ಮಹದೇವಪ್ಪ ತಮ್ಮ ಕುರ್ಚಿಯಲ್ಲಿ ಹೋಗಿ ಕೂಡುವರು)....ಶಂಕ್ರ...... ಸನ್ನಿವೇಶ ತಿಳ್ಕೊ...... ನಿನಗೆ ಕಾರಣಾಂತರದಿಂದ ಆಸ್ತಿ.... ಪಾಸ್ತಿ...... ಎಲ್ಲಾ...... ಹೋಗಿದೆ.... ಮಾನ ಮರ್ಯಾದೆ ಎಲ್ಲಾ ಹೋಗಿ ... ಜೀವನದಲ್ಲಿ ಜಿಗುಪ್ಸೆಯಾಗಿ, ಕತ್ತಿಯಿಂದ ತಿವ್ಕೊಂಡು.... ಆತ್ಮಹತ್ಯೆ ಮಾಡ್ಕೋತೀಯಾ. ಡೈಲಾಗ್ಸ್ ಹೀಗಿರ್‍ಲಿ "ಅಯ್ಯೋ...... ದೈವವೇ.... ನನ್ನ ಆಸ್ತಿ, ಪಾಸ್ತಿ....

ಮಾನ ಮರ್ಯಾದೆ.... ಎಲ್ಲಾ ಹೋದ ಮೇಲೆ.... ಸಾಯೋದೇ ಮೇಲು (ಎಂದು ದುಃಖದಿಂದ ಕತ್ತಿ ತಿವಿದುಕೊಂಡು ಸಾಯುವವನಂತೆ ನಟಿಸಿ ತೋರಿಸು ವನು).... ಸರಿ.... ಈಗ ನೀನ್ಮಾಡು.

**ಶಂಕ್ರಪ್ಪ :-** (ಅರ್ಥಂಬರ್ಧ ದುಃಖದಿಂದ) ಅಯ್ಯೋ.. ನನ್ನ ಆಸ್ತಿ.... ಪಾಸ್ತಿ... ಮಾನ ಮರ್ಯಾದೆಗಳನ್ನು ಕಳೆದುಕೊಂಡು ಬದುಕಿರೋದಕ್ಕಿಂತ ಸಾಯೋದೇ ಮೇಲು (ಎಂದು ಕತ್ತಿಯಿಂದ ಇರಿದುಕೊಂಡವನಂತೆ ಅತಿಕೃತಕ ರೀತಿಯಲ್ಲಿ ಸತ್ತಂತೆ ನಟಿಸುವನು)

**ನಟರಾಜ್:—** ಏಯ್..... ಏಳೋ ಮೇಲೆ. ಹೀಗೇನಯ್ಯ ಸಾಯೋದು ?...... ಆಕ್ಟಿಂಗ್ ನ್ಯಾಚುರಲ್ಲಾಗಿರ ಬೇಕಯ್ಯ.... ನಾನು ಮಾಡಿತೋರ್ಸಿದ್ದು..... ಜ್ಞಾಪಿಸ್ಕೋ... ಆಂ.... ಆಕ್ಟಿಂಗ್.... ನ್ಯಾಚುರ ಲ್ಲಾಗಿರಬೇಕು...... ತಿಳೀತಾ ?

**ಶಂಕ್ರಪ್ಪ :-** ನಾನೆಂದೂ ಸತ್ತು ಅಭ್ಯಾಸ ಇಲ್ವಲ್ರೀ.... ಇದೇ ಮೊದ್ಲ ಸಲ ಸಾಯ್ತಾ ಇರೋದು.

**ನಟರಾಜ್** ನಿನ್ನ ಸಾಯಿ ಅಂತ್ಯಾರಯ್ಯ.... ಹೇಳಿದ್ದು ? ಸಾಯೋ ಆಕ್ಷನ್‌ನ..... ನ್ಯಾಚುರಲ್ಲಾಗ್ಮಾಡೂಂದೆ. ಎಲ್ಲಿ ತಿರ್ಗ ಮಾಡು..... ನ್ಯಾಚುರಲ್.... ನ್ಯಾಚು ರಲ್..... ಆಂ.

**ಶಂಕ್ರಪ್ಪ :-** ಸರಿ...... ಸರಿ.... (ನಟರಾಜ್ ತಿಳಿಸಿದಂತೆಯೇ ನಟಿ ಸುತ್ತಾ) ಅಯ್ಯೋ..... ನನ್ನ ಆಸ್ತಿ.... ಪಾಸ್ತಿ ... ಮಾನ.... ಮರ್ಯಾದೆ ಹೋದ್ ಮೇಲೆ (ದುಃಖ ದಿಂದ) ಬದುಕಿರೋದಕ್ಕಿಂತ...... ನ್ಯಾಚುರಲ್ಲಾಗಿ ಸಾಯೋದೇ ಮೇಲು.... ನ್ಯಾಚುರಲ್ಲಾಗಿ ಸಾಯೋದೇ ಮೇಲು (ತಿವಿದುಕೊಂಡವನಂತೆ ಮಾಡಿ

ನೆಲಕ್ಕೆ ಬೀಳಲು ಹೋಗುವನು. ಅಷ್ಟರಲ್ಲೇ ನಟರಾಜ್ ಹಿಡಿದು ನಿಲ್ಲಿಸುತ್ತಾ)

**ನಟರಾಜ್ :—** ಸಾಯೋದೇನೋ...... ನ್ಯಾಚುರಲ್ಲಾಗೇ ಇತ್ತು.... ಆದ್ರೆ.... ಅದ್ನ.... ಬಾಯ್ನಲ್ಲೇನು ಹೇಳ್ಕೊಂಡು ಸಾಯೋದೇನ್ಬೇಡ.... ಸರಿ..... ನೀನು ಹೋಗಿ ಕೂತ್ಕೋ.... ನೀವ್ ಬನ್ನಿ ಸಾಹೇಬ್ರೇ (ಶಂಕ್ರಪ್ಪ ಹೋಗಿ ಕೂಡುವನು.... ಫಕೃದ್ದೀನ್ ಬರುವನು)...... ನೋಡಿ.... ಸಾಹೇಬ್ರೇ.... ನಿಮ್ಗೆ ಒಬ್ಳು ಗರ್ಲ್ ಫ್ರೆಂಡ್ ಇದಾಳೇ ಅನ್ಕೊಳ್ಳಿ.... ಎಷ್ಟು ಕಷ್ಟಾ ಬಂದ್ರೂ ಕೈ ಬಿಡೋಲ್ಲ.... ಮದ್ವೆ ಆಗೇ ಆಗ್ತೀನಿ.... ಅನ್ನೋದನ್ನ ಹೇಳ್ಕೊಂಡು.... ಆಕ್ಟ್ ಮಾಡಿ.... ನೋಡೋಣ.

**ಫಕೃದ್ದೀನ್ :—** ಅರೆ....ಪ್ಯಾರಿ....ನಮ್ಕೊ ಕೆ ....ಎಷ್ಟು ತಕ್‌ಲೀಫ್ ಬಂದ್ರೂ ನಿನ್ನಾ.... ಬಿಡಾಕಿಲ್ಲ..... ನಿಖಾ.... ಮಾಡೇ.... ಮಾಡ್ಕೊತ್ತೀನಿ.... (ನಟರಾಜ್ ಕಡೆ ತಿರುಗಿ) ಬರಾಬರ್ ಇದ್ಯಾಕ್ಯಾ ನಟರಾಜ್ ಸಾಬ್.

**ನಟರಾಜ್ :—** (ಬೇಸರದಿಂದ)... ಬರಾಬರ್ ಏನೋ ಇದೆ. ಆದ್ರೆ.... ಕನ್ನಡದಲ್ಲಿ ಇಲ್ಲವಲ್ಲಾ ?.... ಇರ್ಲಿ ಬಿಡಿ.... ನಿಮಗೆ ಸೆಟ್ ಆಗೋಂಥ ರೋಲ್ ಕೊಡ್ತೀನಿ..... ಯೋಚ್ನೆ ಮಾಡಬೇಡಿ.... ಹೋಗೀ (ಫಕೃದ್ದೀನ್ ಹೋಗಿ ಕೂಡುವನು ನಟರಾಜ್ ಕೈ ಗಡಿಯಾರ ನೋಡಿಕೊಂಡು) ಇವನೆಲ್ಹೋದ ಕ್ಯಾತಯ್ಯ...... ಇಪ್ಪತ್ನಿ ಮಿಷದಲ್ಲಿ ಬರ್ತೀನಿ ಅಂದೋನು ?

(ಅಷ್ಟು ಹೊತ್ತಿಗೆ..... ಸರಿಯಾಗಿ ಕ್ಯಾತಯ್ಯ.... ಬೆವರನ್ನು ಒರೆಸಿಕೊಳ್ಳುತ್ತಾ ಬರುವನು)

**ಕ್ಯಾತಯ್ಯ :—** ಸಾರಿ ಫ್ರೆಂಡ್ಸ್.... ಮಧ್ಯೆ ಸೈಕಲ್ ಪಂಕ್ಚರ್ ಆಯ್ತು..... ಲೇಟಾಗ್ಹೋಯ್ತು.

**ನಟರಾಜ್ :—** ಸರಿ.... ಸರಿ.... ಕಳ್ಳಂಗೊಂದು ಪಿಳ್ಳೇ ನೆವ.... ನೋಡು ನಾನೊಂದು ಡೈಲಾಗ್ ಹೇಳ್ಬಿಡ್ತೀನಿ.... ಹೇಳು ನೋಡೋಣ..... ಮಗನಿಗೆ ಅಪ್ಪ ಹೇಳ್ತಾ ಇದ್ದಾನೆ. ಮಗ ಯಾವ್ಳೋಳ್ನೊ .. ರಿಜಿಸ್ಟರ್ಡ್ ಮ್ಯಾರೇಜ್ ಮಾಡ್ಕೊಂಡು ಬಂದಿದ್ದಾನೆ.... ಈಗ, ಅಪ್ಪ ಸಿಟ್ಟಿನಿಂದ "ಅಯ್ಯೋ..... ಮನೆಹಾಳ..... ನನ್ನ ವಂಶಕ್ಕೆ ಮಸೀ ಬಳಿದ್ಯಲ್ಲೋ.... ಬೇರೆ ಕುಲದೋಳ್ನ ....ಕಟ್ಕೊಂಡು,..... ನಾನು..... ತಲೆ ಎತ್ಕೊಂಡು.... ತಿರಗ್ದ ಹಾಗೆ..... ಮಾಡ್ಬಿಟ್ಯಲ್ಲೋ..... ನಂಗೆ.... ಮುಖ ತೋರಿಸ್ಬೇಡ.... ಹಾಳಾಗಿಹೋಗು".... ಅರ್ಥವಾಯ್ತ ? ಎಲ್ಲಿ ಮಾಡು.

**ಕ್ಯಾತಯ್ಯ :—** (ನಟರಾಜ್ ಹೇಳಿದಂತೆಯೇ.... ಚಾಚೂತಪ್ಪದಂತೆ) "ಅಯ್ಯೋ.... ಮನೆಹಾಳ.... ನನ್ನ ವಂಶಕ್ಕೇ..... ಮಸಿ ಬಳ್ಧ್ಯಲ್ಲೋ.... ಬೇರೆ ಕುಲ್ದೋಳ್ನ ಕಟ್ಕೊಂಡು.... ನಾನು ತಲೆ... ಎತ್ಕೊಂಡು..... ತಿರುಗ್ದಾಂಗೆ.... ಮಾಡಿ ಬಿಟ್ಯಲ್ಲೋ ?.... ನಂಗೆ ಮುಖ ತೋರಿಸಬೇಡ..... ಹಾಳಾಗಿಹೋಗು"

**ನಟರಾಜ್ :—** (ಸಂತೋಷದಿಂದ ಚಪ್ಪಾಳೆ ತಟ್ಟುತ್ತಾ) ವೆರಿಗುಡ್.... ಫೈನ್.... ಆಕ್ಟಿಂಗೇ ಬರೋಲ್ಲ.... ಅಂತಿದ್ಯಲ್ಲೋ..... ಫೈನಾಗ್ಮಾಡ್ತೀ.... ಮುಂಚೆ ಎಲ್ಲಾ ದ್ರೂ.... ಆಡಿದ್ಯಾ ?

**ಕ್ಯಾತಯ್ಯ :—** ಇಲ್ಲಪ್ಪ.... ಇದೆ ಮೊದ್ಲು.....

**ನಟರಾಜ್ :—** (ಮಹದೇವಪ್ಪನ ಕಡೆ ತಿರುಗಿ)....ಸರಿ..... ಆಯ್ತು..... ಸಾರ್.... ನಾಳೆಯಿಂದ.... ಇಲ್ಲಿ ಬೇಡಸಾರ್..... ಚೆನ್ನಾಗಿರೊಲ್ಲ..... ನಂ.....ರೂಮಿನಲ್ಲೇ ಸೇರೋಣ.... ಈಗೇನೋ ಸಾಹೇಬ್ರು ರಜದಲ್ಲಿ ಇದಾರೆ.... ಪರ್ಮ್ಯ

ಗಿಲ್ಲ.... ನಮ್ಮ ರೂಮ್ ನೋಡ್ದಿ ಇದ್ರೆ, ... ಕ್ಯಾತಯ್ಯನ ಜೊತೇಲಿ ಬನ್ನಿ... ಅವ್ನಿಗೆ ನನ್ನ ರೂಂ ಗೊತ್ತಿದೆ..... ಸರಿ.... ಇನ್ನೇನು .. ಹೋಗೋಣಾ ಅಲ್ವೇ ?

– ತೆರೆ ಸರಿಯುವುದು –

## ದೃಶ್ಯ ೩

[ನಟರಾಜ್ ರೂಂ, ಒಂದು ಟೇಬಲ್, ಅದರ ಮುಂದೆ ಒಂದು ಕುರ್ಚಿ, ಒಂದು ಮಂಚ, ಅದರ ಮೇಲೆ ಹಾಸಿಗೆ, ಒಂದು ಕಡೆ ಬಟ್ಟೆ ಸ್ಟ್ಯಾಂಡ್. ನಟರಾಜ್ ಗಡಿಯಾರ ನೋಡಿಕೊಳ್ಳುತ್ತಾ ಶಥಪಥ ತಿರುಗುತ್ತಿದ್ದಾನೆ]

**ನಟರಾಜ್ :—** 6-30ಕ್ಕೆ ಬರ್ತೀವಿ ಅಂದರೂ.... ಒಬ್ರೂನೂ ಪತ್ತೆ ಇಲ್ವಲ್ಲ.

[ಹೊರಗಿನಿಂದ ಮಹದೇವಪ್ಪ, ಫಕ್ರುದ್ದೀನ್, ಶಂಕ್ರಪ್ಪನ ಪ್ರವೇಶ]

**ನಟರಾಜ್ :–** ಬನ್ನಿ ... ಬನ್ನಿ ... ಯಾಕೆ ಇಷ್ಟು ಲೇಟು...... ಇರೋ ಜಾಗದಲ್ಲೆ ಅಡ್ಜಸ್ಟ್ ಮಾಡ್ಕೊಂಡು.... ಕೂತ್ಕೊಳ್ಳಿ. (ಎಲ್ಲರೂ ಕೂಡುವರು)

**ಮಹದೇವಪ್ಪ :—** "ಇಹ ಸಂಸಾರೆ....ಬಹು ದುಸ್ತಾರೆ"....ಇರತ್ತಲ್ಲಾ .. ಸಂಸಾರ.... ತಾಪತ್ರಯ.

**ಶಂಕ್ರಪ್ಪ :—** ನಟರಾಜ್‌ಗೇನೂ ಹೆಂಡ್ತಿ.... ಜಗ್ಳ ಇಲ್ಲ. ಮಕ್ಳ ಗಲಾಟೆ ಇಲ್ಲ, ಅರ್ಸನ ಅಂಕೆ ಇಲ್ಲ.... ದೆವ್ವದ ಕಾಟ ಇಲ್ಲ

**ಕ್ಯಾತಯ್ಯ :–** ಸುಮ್ನೆ ಟೈಂ ವೇಸ್ಟ್ ಮಾಡೋದ್ಬೇಡ್ರಯ್ಯ.... ಬೇಗ್ಬೇಗ.... ಎಲ್ಲಾ ಡಿಸೈಡ್ ಮಾಡ್ಬೇಕು.

**ನಟರಾಜ್ :—** ಸರಿ.... ಮೊದ್ಲು ಪ್ಲಾಟು.... ರೋಲ್ಸ್....

ಸೆಲಕ್ಷನ್.... ಆಮೇಲೆ ಖರ್ಚಿನ ವಿಷಯ.... ಅದಾದ್ಮೇಲೆ ನಾಟ್ಕ ಆಡೋ ಜಾಗ, ತಾರೀಖು.

ಮಹದೇವಪ್ಪ :- ಒಳ್ಳೆ ಪೌರಾಣಿಕ ನಾಟ್ಕ ಆಡ್ಸಿ ಬಿಡಿ.

ಶಂಕ್ರಪ್ಪ :— ಹೌದು ಪೌರಾಣಿಕ ನಾಟ್ಕಾನೇ ಕರೆಕ್ಟ್.

ಫಕ್ರುದ್ದೀನ್ :— ನಕ್ಕೋಜಿ.... ಪೌರಾಣಿಕ್ ನಾಟಕ್ ಮೇ.... ಮುಜೆ ಕ್ಯಾ ಪಾರ್ಟ್ ಮಿಲಾ, ಸಾ ಮಾ ಜಿ ಕ್ ಖೇಲೇಂಗೆ.

ಕ್ಯಾತಯ್ಯ :- ನಮ್ಗಿರೋ ಅ ನು ಭ ವ ಕ್ಕೆ... ಪೌರಾಣಿಕ್ ಆಡ್ದಾಂಗೇ ಇದೆ. ಸಾಮಾಜಿಕ ಯಾವ್ದಾದ್ರೂ.... ಆಡೋಣ.

ಮಹದೇವಪ್ಪ :— ನೋ..... ನೋ.... ಪೌರಾಣಿಕ್.

ಕ್ಯಾತಯ್ಯ :— ಇಂಪಾಜ್ಜಿಬಲ್.... ಸಾಮಾಜಿಕ.

ಫಕ್ರುದ್ದೀನ್ :— ನೈ.... ಸಾಮಾಜಿಕ್.
(ಎಲ್ಲರೂ ಕಿರಿಚಾಡುವರು)

ನಟರಾಜ್ :— ಶಾಂತಿ..... ಶಾಂತಿ.... ಯಾಕ್ಹೀಗೆ ಕಿತ್ತಾಡ್ತೀರಿ. ಪೌರಾಣಿಕ್ ಬೇಕಾದ್ರೆ.... ಎರ್ಡು ಸಾವಿರ ಖರ್ಚು.... ಆರ್ತಿಂಗ್ಳು ಪ್ರಾಕ್ಟೀಸ್. ಸಾಮಾಜಿಕ ಆಡೋದಾದ್ರೆ ಖರ್ಚು ಕಡಿಮೆ, ಒಂದೂವರೆ ತಿಂಗ್ಳು ಪ್ರಾಕ್ಟೀಸ್. ಪೌರಾಣಿಕ ಆಡೋದಾದ್ರೆ.... ಹಾಡು ಬರ್ಬೇಕು. 3,-4 ಲೇಡಿಸ್ ಪಾರ್ಟ್ ಹೊರಗಿನಿಂದ ಕರ್ಸ್ಬೇಕು ಹೇಳಿ ಸಾಮಾಜಿಕ ಬೇಕೋ.... ಪೌರಾಣಿಕ ಬೇಕೊ.

ಮಹದೇವಪ್ಪ ಶಂಕ್ರಪ್ಪ :— (ಖಿನ್ನರಾಗಿ, ತಗ್ಗಿದ ದನಿಯಲ್ಲಿ) ಸಾಮಾಜಿಕಾನೇ ಇರ್ಲಿ

ನಟರಾಜ್ ;— ಆಲ್‌ರೈಟ್..... ಸಾಮಾಜಿಕ ನಾಟ್ಕ ಆಡೋದು.

ಅಂತ ಡಿಸೈಡ್ ಆಯ್ತು... ಲೇಡಿ ರೋಲ್ಸ್ ಇಲ್ದೇ ಇರೋದು ಆಡ್ಬೇಕು.

**ಕ್ಯಾತಯ್ಯ :—** ಲೇಡಿರೋಲ್ .. ಇಲ್ದೆ.... ಇರೋದು .. ನಾಟ್ಕಾ ನೇನಯ್ಯ ಒಬ್ಬ ಹೀರೋ.... ಒಬ್ಬು ಹೀರೋ ಯಿನ್.... ಒಬ್ಬ ವಿಲನ್ ಇಲ್ದೆ ಇರೋದು ಅಂದ್ರೆ ಎಂತಾದ್ದಯ್ಯ.

**ನಟರಾಜ್ :—** ಕಲೆಯ ಕಾಗುಣಿತಾನೆ ತಿಳೀದಿರೊ.... ಕ್ಯಾಶಿಯರ್ ಕ್ಯಾತಯ್ಯ ನಿಂದು ಹಳೇ ಕಾಲದ ಥಿಂಕಿಂಗ್ ... ಇತ್ತೀಚಿಗೆ ಲೇಡಿ ರೋಲ್ ಇಲ್ದೆ ಆಡೋದು ನ್ಯೂಟ್ರೆಂಡ್.

**ಕ್ಯಾತಯ್ಯ :—** ಲೇ ಬ ಕ್ರ.... ಲೇಡಿರೋಲ್ ಹಿಡ್ಕೊಂಡ್‌ಬರೊ ಯೋಗ್ಯತೆ ಇಲ್ಲಾ ಅನ್ನು....ನ್ಯೂಟ್ರೆಂಡು.... ಅದೂ ಇದೂ ಅನ್ಬೇಡ.

**ನಟರಾಜ್ :—** ಹಾಗೇ ಇಟ್ಕೋ.... ಒಟ್‌ನಲ್ಲಿ.... ನೀ ಹೇಳೋದು ಸ್ವಲ್ಪ ಮಟ್ಟಿಗೆ ನಿಜ.

**ಶಂಕ್ರಪ್ಪ :—** ಆಯ್ತು..... ಸಾಮಾಜಿಕ ವಿಥೌಟ್ ಲೇಡಿ..... ಆಲ್ ರೈಟ್.

**ನಟರಾಜ್ :—** ಸರಿ ಈಗ ಪ್ಲಾಟ್ ವಿಚಾರ.... ನಾನೊಂದು ಹಾಸ್ಯ ಪ್ರಧಾನವಾದ ನಾಟ್ಕ ಹೇಳ್ತೀನಿ. ಹೆಸ್ರು "ಮಿಡ್ಲ್‌ಕ್ಲಾಸ್" ಸಾರಾಂಶ :- ಮಧ್ಯಮ ವರ್ಗದ ವರ ಥಳುಕಿನ ಜೀವನ, ಕಾಸು ಕಾಸಿಗೆ ಲಾಟ್ರೆ ಹೊಡ್ಯೋದು.... ಬಾಡ್ಗೆ ಮನೆ ಪಾಡು ಇತ್ಯಾದಿ.

**ಶಂಕ್ರಪ್ಪ :—** ಕಥೆ ಏನೋ ಚೆನ್ನಾಗಿದೆ. ಆದ್ರೆ ನಿಜ ಜೀವನದಲ್ಲಿ ಲಾಟ್ರೆ ಹೊಡೀತಿರೋದಲ್ದೆ, ಸ್ಟೇಜ್‌ನಲ್ಲೂ ಅದೇನಾ.... ನಾಟಕದಲ್ಲಾದ್ರೂ.... ಸ್ವಲ್ಪ ಅನು [illegible]

ನಟರಾಜ್ ಒಳ್ಳೆ ಮಂಡೂಕ್ದ್ಹಾಗೆ ವಟಗುಡ್ಬೇಡ.... ಸ್ವಲ್ಪ ಸುಮ್ನಿರು. ಈ ನಾಟ್ಕದಲ್ಲಿ.... ಒಟ್ಟು ಏಳು ರೋಲ್ಸ್.... ಒಂದು.... ಬಾಡಿಗೆ ಮನೆಗಳ ಮಾಲೀಕ, ಎರ್ಡು.... ಬಾಡ್ಗೆ ಮನೇಲಿ ವಾಸವಾಗಿರೋ ಮಧ್ಯಮ ದರ್ಜೆ... ಸರ್ಕಾರಿ ನೌಕರ. ಇದಕ್ಕೆ ಒಬ್ಬರ್ನ ಗೊತ್ಮಾಡಿದೀನಿ ... ಇನ್ನೇನ್ಬರ್ತಾರೆ.

ಫಕ್ರುದ್ದೀನ್ :- ಹೊರಗ್ನೋರು.... ಕೈಕು....ನಾವ್‌ನಾವೇ ಆಡೋಣ.

ಮಹದೇವಪ್ಪ ಅದ್ಹೇಗ್ರಿ ನಾವಿರೋದು 5 ಜನ, 7 ಪಾರ್ಟ್ ಹೇಗ್ರಿ ಮಾಡೊದು.

ಕ್ಯಾತಯ್ಯ :— ಅದೇನ್ಮಹಾ.... ಟೂಬೈತ್ರಿ, ತ್ರೀಬೈಫೈವ್-ಕಾಪಿ ಇದ್ಹಾಗೆ. ಇದಕ್ಕೂ ಫೈಬೈ ಸೆವೆನ್ ಮಾಡಿದ್ರಾಯ್ತು ಸುಮ್ನೆ.... ಮಾತ್ನಲ್ಲೆ ಟೈಂ ವೇಸ್ಟ್‌ಮಾಡ್ದೆ.... ನಟ ರಾಜ್‌ಗೆ ಬಿಡಿ.

ನಟರಾಜ್ :— ಆಯ್ತೇನ್ರಪ್ಪ, ಇನ್ನು ಮೂರು.... ಬಾಡಿಗೆ ಮನೆ ಹುಡ್ಕೊಡೋ ಬ್ರೋಕರ್.... ಬಹಳ ಫನ್ನಿರೋಲು, ನಾಟಕದ ಬ್ಯಾಕ್‌ಬೋನು.... ಈ ಪಾರ್ಟ್ ಕ್ಯಾತಯ್ಯಂಗೆ ಲಾಯಕ್ಕು.... ನಾಲ್ಕನೇದು...... ಟ್ಯಾಕ್ಸಿ ಡ್ರೈವರ್ ಕರೀಂ ಫಕ್ರುದ್ದೀನ್ ಮಾಡ್ಲಿ. ಓಕೆ, ಐದು ಬಾಡಿಗೆ ಮನೆ ಓನರ್ ಮಗ-ಅಲಂಕಾರ ವಿದ್ಯಾರ್ಥಿ-ಶಂಕ್ರಪ್ಪ ಮಾಡ್ಬೋದು, ಹಾಲು ಮಾರೋ ಹಾಲಪ್ಪ ಪ್ಯಾನ್ ಫುಟ್‌ಮಾದ.... ಅವ್ನ ಮನೇಗೆ ಹೋಗಿ ಹೇಳಿದೀನಿ. ಇನ್ನೂ ಒಂದು ತಿಂಗಳು ರಜಾ ಎಕ್ಸ್‌ಟೆಂಡ್ ಮಾಡ್ತಾನೆ, ಆದ್ರೂ ಇನ್ನೂರ್ ದಿನ ಬಿಟ್ಟು ಪ್ರಾಕ್ಟೀಸ್‌ಗೆ ಬರ್ತೀನಿ ಅಂದ, ಇನ್ನು ಕೊನೇದು.... ಹೊಸದಾಗಿ ಬಾಡಿಗೆಗೆ ಬಂದು-ಓನರ್‌ಗೆ-ಬುದ್ಧಿ ಕಲಿಸೋನು-ಈ ಪಾರ್ಟ್ ನಾನೇ ಮಾಡ್ತೀನಿ.

ಶಂಕ್ರಪ್ಪ :— ನೀವು ಹೇಳಿದ ಪಾರ್ಟ್ ನಂಗೇನೋ ಒಪ್ಗೆ.... ಇದೆ ಆದ್ರೆ.... ಬೇರೆ ಅವ್ರಗೆ....

ಮಹದೇವಪ್ಪ :— ಎಲ್ರುಗೂ.... ಎಲ್ಲಾ ಪಾರ್ಟ್ ಒಪ್ಗ ಇದ್ದೇ ಇರತ್ತೇ

ನಟರಾಜ್ :— ಇನ್ನು ಖರ್ಚು, ಜಾಗ ಇವಗ್ಳು, ನಾನೆಲ್ಲ ವಿಚಾ ಮಾಡಿ ಒಂದು ಡಿಸಿಷನ್‌ಗೆ ಬಂದಿದೀನಿ. ಅದು ಎ ನಾಮಿಕಲ್ಲಾಗೂ ಇದೆ, ಅನ್ಕೂಲವಾಗೂ ಇವೆ. ಆಮೇಲೆ ಕಿತ್ತಾಡ್ಬೇಡಿ. ನಾಟ್ಕದ ಜಾಗ...ಈ ಊರ್ನ ರಾಮಮಂದಿರ.... ಅಲ್ಲಿ ಸ್ಟೇಜ್‌ಗೆ ಅನುಕೂಲ ಇದೆ. ಮೇಲೆ ಷೆಲ್ಟರ್ ಇದೆ. ಅವರ್ದಿ ಮೈಕ್, ಲೈಟ್ ಕನೆಕ್ಷನ್‌ಗೆ ವಿಚಾರ್‍ಸಿದೀನಿ. ಕೂರೋದಕ್ಕೆ ಕುರ್ಚಿ ಗಳೂ, ಜಮುಖಾನ ಎಲ್ಲಾ ಇವೆ.

ಫಕ್ರುದ್ದೀನ್ :— ರಾಮ್ ಮಂದಿರ್‌ನಲ್ಲಿ !.... ಎ.... ಕ್ಯಾ.... ಹರ್‌ಕತ್

ಕ್ಯಾತಯ್ಯ :— ಹೈಸ್ಕೂಲ್ ಗ್ರೌಂಡ್ಸ್...... ಚೆನ್ನಾಗಿರುತ್ತಯ್ಯ.

ಮಹದೇವಪ್ಪ :— ನಟ್ರಾಜ್ ಹೇಳ್ದಾಗೆ.... ರಾಮಮಂದಿರ ಕರೆಕ್ಟ್.

ಶಂಕ್ರಪ್ಪ :— ಎಸ್.... ಎಸ್.

ಕ್ಯಾತಯ್ಯ :— ನೋ.... ನೋ.... ಹೈಸ್ಕೂಲ್

ಮಹದೇವಪ್ಪ :— ಇಲ್ಲ.... ರಾಮಮಂದಿರ.

ಫಕ್ರುದ್ದೀನ್ :— ಬಿಲ್‌ಕುಲ್.... ಹೈಸ್ಕೂಲ್

ನಟರಾಜ್ :— ಯಾವ್ದು ..... ನಯ್ಯ ... ಕ್ಯೂನಲ್ಲಿ ಜನಗ್ಳು.... ಕಿತ್ತಾಡಾಗ ಕತ್ತಾಡ್ತಾರೆ. ಲೇ ಕ್ಯಾತಯ್ನ.... ಖರ್ಚು ಲೆಕ್ಕ ಹಾಕೊ.

ಕ್ಯಾತಯ್ಯ :— (ಜೇಬಿನಿಂದ 1 ಕಾಗದ, ಪೆನ್ ತೆಗೆಯುತ್ತಾ)

**ನಟರಾಜ್ :—** ಸ್ಟೇಜ್ ಸೆಟ್ಟಿಂಗ್–ನೂರೈವತ್ತು.... ಮೈಕ್ ಅಂಡ್ ಲೈಟ್ ನೂರು–ವಾದ್ಯ–ಐವತ್ತು–ಮೇಕಪ್ ಅಂಡ್ ಡ್ರೆಸ್–ನೂರು ಫೋಟೋಗಳು–ಪ್ರಚಾರ, ರಾಮ ಮಂದಿರದ ಬಾಡಿಗೆ, ನಾಟಕದ ರಾಯಲ್ಟಿ–ಇತ್ಯಾದಿ ಇನ್ನೂರೈವತ್ತು.... ಎಷ್ಟಾಯಿತು.

**ಕ್ಯಾತಯ್ಯ :—** (ಕೂಡಿ).... ಆರುನೂರ ಐವತ್ತು.

**ನಟರಾಜ್ :** ಏಳುನೂರು ಅನ್ನು.... ಡಿವೈಡೆಡ್ ಬೈ ಸವೆನ್.... ಆಲ್ವೆ.... ಒಬ್ಬೊಬ್ಬರಿಗೆ.... ನೂರು, ನೂರು.... ಫಿಫ್ಟಿ ಪರ್‌ಸೆಂಟ್ ಈಗ, ಇನ್ನು ಫಿಫ್ಟಿ ಪರ್‌ಸೆಂಟು ಫಸ್ಟ್‌ಗೆ ಕೊಡಿ. ಕ್ಯಾತಯ್ಯ ನೀನೆ ವಸೂಲು ಮಾಡ್ಬೇಕು.... ಖರ್ಚು ವೆಚ್ಚದ ಲೆಕ್ಕ ಇಡ್ಬೇಕು.

**ಶಂಕ್ರಪ್ಪ :—** ಅಲ್ಲ... ಡ್ರೆಸ್, ಮೇಕಪ್‌ಗೆ ದುಡ್ಯಾಕೆ.... ಡ್ರೆಸ್ ನಮ್ದೇ.... ಮೇಕಪ್‌ಗೆ ಒಂದಿಷ್ಟು ಫೇಸ್ ಪೌಡರ್ ದಪ್ಪಗೆ ಬಳಕೊಳ್ಳೋದು, ಖರ್ಚು ಕಡಿಮೆ ಆಗೊಲ್ವೆ.

**ಮಹದೇವಪ್ಪ :—** ಒಲೆ ಬೂದಿ ಬಳ್ಕೊಂಡು... ಬರೀ ಚಡ್ಡಿ ಹಾಕ್ಕೊಂಡು.... ಮಾಡಿದ್ರೆ.... ಪೌಡರ್ ದುಡ್ಡು ಉಳ್ಯತ್ತೇ.... ನಾಟ್ಕ ಆಡಿದ್ರೆ "ನೋಡಪ್ಪ.... ಇಂಥೋರು ನಾಟ್ಕ ಆಡಿದ್ರು, ಎಷ್ಟು ಚೆನ್ನಾಗಿ ಆಡಿದ್ರು" ಅನ್ಬೇಕ್ರಿ.... ಅದ್ಬಿಟ್ಟು....

**ಫಕೃದ್ದೀನ್ :—** ಪೌಡರ್ ಬಳ್ಕೊಂಡು ಮಾಡಿದ್ರೆ.... ನಮ್ದುಕೆ ಬಾಬಯ್ಯ .. ಹಬ್ಬದಲ್ಲಿ.... ವೇಷ ಹಾಕ್ಕಂಡಂಗ್ ಇರತ್ತೆ.... ಮೇಕಪ್ ಬೇಕೇ ಬೇಕು.

**ಶಂಕ್ರಪ್ಪ :—** ಎಲ್ಲಾರು ನೂರು ನೂರು ಸಮನಾಗೆ ಯಾಕ? ನಮ್ಮ ನಮ್ಮ ಸಂಬಳ ಗ್ರೇಡ್ ಪ್ರಕಾರ ಕೊಡ್ತೀವಿ. ನಾನೈವತೆ ಕೊಡೋದು.

ಕ್ಯಾತಯ್ಯ :— ಲೇ ಇದೇನ್ ತರಕಾರಿ ವ್ಯಾಪಾರಾನೇನಯ್ಯ.... ನಿನ್ನ ಸೆಕೆಂಡ್ ಡಿವಿಷನ್ ಬುದ್ದಿ ಇಲ್ ತೋರಿಸ್ಬೇಡ.

ಶಂಕ್ರಪ್ಪ :- (ಅತಿಕೋಪದಿಂದ) ಹಲ್ ಹಿಡಿದ್ದು ಮಾತಾಡ್ರಿ ... ಸೆಕೆಂಡ್ ಡಿ ವಿ ಷ ನ್ ಅಂತ ಮಾತಾಡಿದ್ರೆ ... ಮಾತಾಡಿದ್ರೆ.

ಕ್ಯಾತಯ್ಯ :— (ಮತ್ತೂ ಸಿಟ್ಟಾಗಿ) ಏನ್ಮಾಡ್ತಿಯಾ.... ಸಾವ್ರಸಾರಿ ಹೇಳ್ತೀನಿ.... ಸೆಕೆಂಡ್ ಡಿ ವಿ ಷ ನ್.... ಸೆಕೆಂಡ್ ಡಿವಿಷನ್.

ಶಂಕ್ರಪ್ಪ :— (ರೋಶದಿಂದ ಒಂದು ಕುರ್ಚಿ ಎಳ್ಕೊಂಡು) ಏನ್ಮಾಡ್ತೀನಾ.... ಹಲ್ಲು ಉದರ್ಸ್ತೀನಿ.

ಕ್ಯಾತಯ್ಯ :— (ಅವನೂ 1 ಕುರ್ಚಿ ಎಳ್ಕೊಂಡು) ಉದರ್‌ಸೋ.... ನೋಡೋಣ.

ಫಕ್ರುದ್ದೀನ್ :- ಏಕ್ಯಾಜಿ.... (ಇಬ್ಬರ ಮಧ್ಯೆ ನುಗ್ಗಿ ಇಬ್ಬರ ಕುರ್ಚಿಗಳನ್ನು ಎತ್ತಿಕೊಂಡು ಇಡವನು)

ಮಹದೇವಪ್ಪ ಬುದ್ಧಿ ಇದ್ಯೇನ್ರಿ.... ಅಫಿಷಿಯಲ್ಲಾಗಿ, ಮಕ್ಳಾದ್ಹಾಂಗಾಡ್ತೀರೇನ್ರಿ.... ನಿಲ್‌ಸ್ರಿ.

(ಇಬ್ಬರು ಸಮಾಧಾನವಾಗುತ್ತಾ ಬರುವರು)

ನಟರಾಜ್ :— ಆಯ್ತೇನ್ರಪ್ಪ.... ಮಹದೇವಪ್ಪನವರೇ.... ನೀವ್ ಹೇಳ್ದಾಗೆ ಪೌರಾಣಿ ನಾಟ್ಕಾನೆ ಆಡೋಣ.

ಮಹದೇವಪ್ಪ :- ಇದೇನ್ರಿ ನಿಮ್ಗೆಕ್ಕೊಂದ್ಮಾತು.

ನಟರಾಜ್ :— ಇಲ್ಲಾ ಸಾರ್.... ನಾವು ಕುರುಕ್ಷೇತ್ರ ನಾಟ್ಕ ಆಡಿದ್ರೆ ಗ್ರಾಂಡ್ ಸಕ್ಸಸ್.... ಆಗುತ್ತೇ ಸಾರ್.... ನೋಡಿ ಎಷ್ಟು ನ್ಯಾಚುರಲ್ಲಾಗಿ.... ಜಗ್ಳ ಆಡ್ತಾರೆ.... ನಾಚ್ಕೆ ಆಗ್ಬೇಕು.... ನೋಡ್ರಯ್ಯ, ನೀವ್ಹೀಗೆ ಕಿತ್ತಾಡೋ

ದಾಪ್ರೆ, ನಾಟ್ಕಾನೂ ಬೇಡ, ... ಯಾತರ್ದೂ ಬೇಡ.

ಶಂಕ್ರಪ್ಪ :— ಅಲ್ಲಾ ನಟರಾಜ್.... ನೀವೇ ಹೇಳಿ.... ನನ್ನ ಸೆಕೆಂಡ್.... ಡಿವಿಷನ್.... ಅಂತ ಹಾಸ ಮಾಡ್ಕೊಳ್ತೀದೇ.... ನಾನು.... ನೂರು ಅಲ್ದಿದ್ರೆ ನೂರೈವತ್ತು ಕಾಂಟ್ರಿಬ್ಯೂಷನ್ ಹಾಕ್ತೀನಿ.

ಕ್ಯಾತಯ್ಯ :— ನಾನೇನೋ ತಮಾಷೆಗೆ ಹಾಗಂದ್ರೆ.... ಇವ್ನು ಹಲ್ಲು ದ್ರಿಸ್ತೀನಿ, ಅನ್ಕೊಳ್ತೀದೇ.... ಹುಲ್ಲುದ್ರಿಸ್ತೀನಿ ಅಂದ್ರೂ ಪರ್ವಾಗಿಲ್ಲ. ಕುರ್ಚಿ ಎತ್ಕೊಳ್ತೀದೇ.... ನೀನೆ.... ಹೇಳೂ ನಾನ್ಯಾವತ್ತಾದ್ರೂ.... ಯಾರ್ನಾರ ಮನ ಸ್ಪೂರ್ವಕವಾಗಿ ಬೈದಿದ್ದೇನ್ಯೆ ಶಂಕ್ರಪ್ಪ.

ಶಂಕ್ರಪ್ಪ :— ಆಯ್ತು ಬಿಡಿ ... ನಾನು ಯಾವತ್ತೂ ಯಾರ್ಗೂ.... ಮನಸ್ಪೂರ್ವಕವಾಗಿ ಹಲ್ಲುದ್ರಿಸ್ತೀನಿ.... ಅಂದಿರ್ಲಿಲ್ಲ.

ನಟರಾಜ್ :— ಹೌದಯ್ಯ .. ಏನೋ..... ಒಂದು ಸಂತೋಷಕೋಸ್ಕರ, ಕಲೆಗೋಸ್ಕರ.... ನಾಟ್ಕ ಆಡೋಣಾ ಅಂದ್ರೆ.... ಯಾಕ್ಹೀಗೆ ಮಾಡ್ತೀರಾ.... (ಕೈ ಮುಗಿಯುತ್ತಾ) ದಯವಿಟ್ಟು ಎಲ್ರೂ ಸಹಕರಿಸ್ಬೇಕು. ಇವತ್ತಿಗೆ ಸರಿಯಾಗಿ 1½ ತಿಂಗಳಿಗೆ ನಾಟಕ ಆಡ್ಬೇಕು. ನಾಳೆ ಪೂಜೆ ಮಾಡಿ, ನಾಟ್ಕ ಪ್ರಾಕ್ಟೀಸ್ ಶುರು ಮಾಡೋಣ. ಒಬ್ಬೊಬ್ರಾಗಿ ಸ್ಕ್ರಿಪ್ಟ್ ಬರ್ಕೊಳ್ತಾ ಹೋಗಿ. ನಾಲ್ಕು ದಿನದಲ್ಲಿ ಎಲ್ಲಾರ್ದೂ ಕಂಪ್ಲೀಟ್ ಆಗಿರ್ಬೇಕು. ಬೇರ್ಯೋರ ಡೈಲಾಗ್ಸ್‌ನ ಕ್ಯಾಚ್‌ವರ್ಡ್ ಬರ್ಕೊಂಡ್ರೆ ಸಾಕು. ಯಾರು ಮೊದಲು ಬರ್ಕೋ ತೀರಾ ?

ಮಹದೇವಪ್ಪ :— ಸರಿಕೊಡಿ.... ನನ್ಮಗಳ ಕೈಲಿ ಬರಿಸ್ತೀನಿ.

ಫಕ್ರುದ್ದೀನ್ :— ಹರಿಗೆ.... ಜ್ವರ.... ನಂದೂ ಪಾರ್ಟ್ ಬರ್ಸಿ.... ನಂಗೆ ಓದಾಕೆ ಬತ್ತಾದೆ.... ಸರ್ನಾಗಿ.... ಬರ್ಯಾಕೆ ಬರಾಕಿಲ್ಲ.

ನಾರ್ ಸಾರಿ.... ಕನ್ನ ಎಕ್ಸಾಮ್‌ನಲ್ಲಿ ಫೇಲ್ ಆಗಿ ಇಂಕ್ರಿಮೆಂಟ್ ನಿಂತಿತ್ತು.

**ಮಹದೇವಪ್ಪ :—** ಆಗ್ಲಿ (ನಟರಾಜನ ಹತ್ತಿರ ಪುಸ್ತಕ ತೆಗೆದು ಕೊಳ್ಳುವನು)

**ನಟರಾಜ್ :—** ಅಂದ್ಹಾಗೆ ನಾಳೆ 6-30ಕ್ಕೆ ಸರಿಯಾಗಿ, ಎಲ್ರೂ ಬನ್ನಿ.... ನೋಡ್ರಪ್ಪ ಟೈಮ್ ಮಾತ್ರ ಸರಿಯಾಗಿ ಕೀಪ್ ಅಪ್ ಮಾಡ್‌ಬೇಕು. ಯಾರೂ ಯಾವತ್ತೂ ಚಕ್ಕರ್‌ಕೊಡ್ಬ್ಯಾರ್ದು. ತಿಳೀತಾ ಎಲ್ಲಾ ಕಷ್ಟ ಪಟ್ಟಿದ್ದೀರಾ.... ಕಾಫಿ ಮಾಡ್ಕೊಡ್ತೀನಿ.... ತಡೀರಿ. (ರೂಂನ ಒಂದು ಮಗ್ಗಲಿಗೆ ಹಾಕಿದ ಕರ್ಟನ್ ಹಿಂದೆ ಹೋಗುವನು)

**ಭೀಮರಾಯ :—** (ಎಲ್ಲರನ್ನು ನೋಡಿ, ನಟರಾಜ್ ಇಲ್ಲದನ್ನು ಗಮನಿಸಿ) ಇವ್ರು ಎಲ್ಲಿ....?

**ಮಹದೇವಪ್ಪ :—** ಯಾರೂ.... ಯಾರ್ಬೇಕಾಗಿತ್ತು.... ಯಾರ್ನೀವು ?

**ಭೀಮರಾಯ :—** ಅರೆ.... ಈ ರೂಂನೋರು.... ಬಾ ಅಂದಿದ್ರು... ನನ್ಹೆಸ್ರು ಬೀಮ್ ಫ್ಯಾಕ್ಟ್ರಿ ಬಿಸ್ಕತ್‌ರಾಯ ಅಂತ.

**ಕ್ಯಾತಯ್ಯ :—** (ಆಶ್ಚರ್ಯದಿಂದ) ಏನೂ ಬೀಮ್ ಪ್ಯಾಕ್ಟ್ರೀ ಬಿಸ್ಕತ್ ರಾಯ್ರೆ ಇದ್ಯಾವ್ದು ಹೊಸತರ ಹೆಸ್ರೂ.

**ಭೀಮರಾಯ :—** ಹಾಗಂದ್ನೆ.... ನಾನು.... ಕರ್ಮ.... ಬಿಸ್ಕತ್‌ಪ್ಯಾಕ್ಟ್ರಿ ಭೀಮರಾಯ ಅಂತ.

**ಫಕ್ರುದ್ದೀನ್ :...** ಬಿಸ್ಕತ್ ಪ್ಯಾಕ್ಟ್ರು.... ಓನರ್.... ಕ್ಯಾ.

**ಭೀಮರಾಯ :...** ಇಲ್ಲ.... ಸ್ಟೋರ್ ಕೀಪರ್.... ನಟರಾಜ್ ನಾಟ್ಕ ಮಾಡೋಕೆ ಕರ್ಕೊಂಡಿದ್ದಾರೆ.... ನಾನೂ.... ಮನೇಲಿ ಒಬ್ನೆ, ನಾಟ್ಕಾನಾರೂ ಮಾಡೋಣಾಂತ.

**ಮಹದೇವಪ್ಪ :—** ಒಬ್ರೇನೇ.... ಸಂಸಾರ.... ಮಕ್ಳು.... ಇಲ್ವೇ.

ಭೀಮರಾಯ :.... ಇಲ್ದೇ ಏನೂ.... ನನ್‌ಮಗ ರಂಗರಾವ್ ಅಂತ. ಬಳ್ಳಾರಿಗೆ ಕೊಟ್ಟಿದ್ದೀನಿ. ಎರಡು ವರ್ಷ ಆಯ್ತು ಮದ್ವೆ ಆಗಿ. ಹೋದ್ ತಿಂಗ್ಳು ಹೆರ್ಗೆ ಆಯ್ತು. ಹೆಣ್ಮಗ್ಳು.... ಇನ್ನೊಬ್ಬ ಹೆಣ್ ಮಗ್ಳು ಹೇಮಾವತಿ ಅಂತ-ಚಿತ್ರದುರ್ಗ ಬಾಯ್ಸ್ ಹೈಸ್ಕೂಲ್‌ನಲ್ಲಿ ಡ್ರಿಲ್ ಟೀಚರ್.

(ಎಲ್ಲರೂ ದಿಗ್ಭ್ರಮೆಗೊಳ್ಳುವರು)

ಶಂಕ್ರಪ್ಪ :— ನಿಮ್‌ಮಗ ರಂಗರಾವ್‌ಗೆ.... ಹೆರ್ಗೆ ಆಯ್ತೆ, ಹೆಣ್ಮಗೂನೇ.

ಮಹದೇವಪ್ಪ ನಿಮ್‌ಮಗ್ಳು.... ಗಂಡು ಹುಡುಗ್ರ ಹೈಸ್ಕೂಲಿನಲ್ಲಿ ಡ್ರಿಲ್ ಟೀಚರ್ರೆ.

ಫಕ್ರುದ್ದೀನ್ :.. ಅರೆಇಸ್ಕಿ ಗಂಡಸ್‌ಗೆ. ಎರ್ಗೆ..... ಕೈಸೆ ಆಗ್ತದೆ ?

ಭೀಮರಾಯ ಹಾಗಂದರ್ನೇ..... ಕರ್ಮ.... ನನ್‌ಮಗ.... ರಂಗರಾವ್ ಅಂತ ಚಿತ್ರದುರ್ಗದಲ್ಲಿ ಡ್ರಿಲ್ ಟೀಚರ್. ಇನ್ನೂ ಮಗ್ಳು ಹೇಮಾವತಿ ಬಳ್ಳಾರಿನಲ್ಲಿದ್ದಾಳೆ. ಹೆರ್ಗೆ ಆಗಿ.... ಹೆಣ್ಮಗು..... ನನ್ ಹೆಂಡ್ತಿ ದುರ್ಗದಲ್ಲಿ ಮಗ್ಳ ಹತ್ರ ಇದ್ದಾಳೆ.

ಮಹದೇವಪ್ಪ ಅಲ್ಲಾ ಮಾಮೂಲಾಗೆ ಹೀಗೆ ಕನ್‌ಫ್ಯೂಸ್ ಮಾಡ್ಕೋತೀರ..... ಅಂಥಾದ್ರಲ್ಲಿ.... ನಾಟ್ಕದಲ್ಲಿ ಹೇಗೆ ಮಾಡ್ತೀರ.

ಭೀಮರಾಯ ಏನ್ಮಾಡೋದು.... ವಯಸ್ಸಾಯ್ತು, ಕಾಡು ಹೋಗು ಊರ್ಬಾ ನ್ನುತ್ತೆ.

(ಅಷ್ಟರಲ್ಲಿ ನಟರಾಜ್ ಕಾಫಿ ಲೋಟಗಳನ್ನು ಟ್ರೇನಲ್ಲಿಟ್ಕೊಂಡು ಬರುತ್ತಾ)

ನಟರಾಜ್ :— ಕಾಡ್ಹೋಗುನ್ನುತ್ತೆ.... ಊರ್ಬಾನ್ನುತ್ತೆ ಅಲ್ಲಾ

ಭೀಮ್ರಾಯ್ರೇ. ಊರ್ಗ್ಹೋಗು ಅನ್ನುತ್ತೀ, ಕಾಡ್ಬ್ಯಾ ನ್ನುತ್ತೀ ಅನ್ನಿ. ನೋಡಿ ಇವ್ರೆಲ್ಲಾ ನಮ್ಮ ಆಫೀಸ್‌ನೋರು, ನಮ್ಮ ನಾಟ್ಕದ ಪಾತ್ರಧಾರಿಗಳು.

(ಎಲ್ಲರಿಗೂ ಕಾಫಿ ಕೊಡುತ್ತಾ).

ಮಹದೇವಪ್ಪ :..... (ಕಾಫಿ ಕುಡಿಯುತ್ತಾ) "ಕಾಫಿ ಹೈಕ್ಲಾಸಾಗಿದೆ, ಹಾಲು ಗಟ್ಟಿ ಇರುತ್ತೇಂತ ಕಾಣುತ್ತೆ.

ನಟರಾಜ್ :-- ತರೋನು ಗಟ್ಟಿಯಾಗಿದ್ದಾನೆ.

(ಎಲ್ಲರೂ ಹೊರಡಲನುವಾಗುವರು)

ನಟರಾಜ್ :— ಸರಿ... ನಾಳೆ ಎಲ್ಲಾ ಕರೆಕ್ಟಾಗಿ ಸಂಜೆ 6-30ಕ್ಕೆ ಬರ್ಬೇಕು. ಭೀಮ್ರಾಯ್ರೇ ನಾಳೆ ನೀವು 6-30ಕ್ಕೆ ಸರಿಯಾಗಿ ಬನ್ನಿ.

ಮಹದೇವಪ್ಪ :.... ಬರ್ತೀವಿ.... ಗುಡ್‌ನೈಟ್.

(ತೆರೆ ಸರಿಯುವುದು)

# ದೃಶ್ಯ ೪

(ನಟರಾಜ್‌ನ ಮನೆ, ಗಳಿಗೆ ಗಳಿಗೆಗೂ ಕೈಗಡಿಯಾರ ನೋಡಿಕೊಂಡು ಶಥ ಪಥ ತಿರುಗುತ್ತಿದ್ದಾನೆ)

ನಟರಾಜ್ :—. ಅಲ್ಲ ಪ್ರಾಕ್ಟೀಸ್ ಶುರು ಮಾಡಿ......ಇವತ್ಗೆ ಸರಿಯಾಗಿ ಇಪ್ಪತ್ತೈದು ದಿನ ಆಯ್ತು. ಒಬ್ರಿಗಾದ್ರೂ.... ಡೈಲಾಗ್ಸೇ ಬಾಯ್ಗೆ ಬರಲ್ವಲ್ಲಾ.... ನಾನೇನು...... ಇವ್ರಕೈಲಿ ನಾಟ್ಕ ಆಡ್ಸೋದು ?.... ಒಬ್ಬಾರ ಟೈಂಗೆ ಸರಿಯಾಗಿ ಬರಲ್ಲ..... ಪ್ರತಿದಿನ ಇಬ್ರಾದ್ರೂ ಚಕ್ಕರ್‌ಹೊಡೀತಾರೆ. ಏಳೂವರೆ ಆಯ್ತಲ್ಲ...... ಒಬ್ಬನ ಸುಳಿವೂ ಇಲ್ಲ ?

(ಹೊರ ಬಾಗಿಲು ಬಡಿದ ಶಬ್ಧ ಆಗುವುದು. ಬಾಗಿಲು ತೆಗೆದು 'ಯಾರು ಬಂದವರು' ಎಂದು ನೋಡದೆ, ಬಾಗಿಲು ತೆರೆದು ಹಿಂದಿರುಗುತ್ತಾ)

ನಟರಾಜ್ :— ಏನ್ರಪ್ಪಾ ... ಇಷ್ಟು ಲೇಟಾಗಿ ಬರೋದು ? (ಹೊರಗಿನಿಂದ ಪಾರ್ಟುದಾರರ ಬದಲು ಓರ್ವ ಆಗಂತುಕನ ಪ್ರವೇಶ. ವೇಷ ಧಾರವಾಡದ ಕಡೆಯವನಂತೆ ಇದೆ)

ಆಗಂತುಕ :.... ಹಾನೇನ್ಮಾಡ್ಲಪ್ಪ ?.... ಡಬ್ಬಿ.... ಬರೋಬರ್.... ಒಂದು ತಾಸ್ ಲೇಟ್ ಆಗಿ.... ಬಂತ್ರೀಪ್ಪ. (ಕಕ್ಕಾಬಿಕ್ಕಿಯಾಗಿ ಹಿಂತಿರುಗಿ ನೋಡಿ)

ನಟರಾಜ್ :— ಯಾರ್‌ನೀವು.... ಏನ್ಬಂದ್ರಿ ?

ಆಗಂತುಕ : ನಾನ್ರೀ. ಶಿದ್ಧಪ್ಪ ಬ ಶ ಪ್ಪ ಮುರ್ಕಮನೆ.... ಅಂತಾರ್ರೀ..... ಭಾವ್ಯಾಗ್ ಭೆಟ್ಯಾಕ್.... ಬಂದೀನ್ರೀ.

ನಟರಾಜ್ :— (ಅರ್ಥವಾಗದೆ ಗಾಭರಿಯಿಂದ).... ಅ ಲ್ರಿ ೀ.... ಭಾವೀಗೆ ಯಾಕೆ.... ಬಟ್ಟೆ ಹಾಕಿದ್ರಿ.... ನನ್ನ ಹತ್ರ ಪಾತಾಳಗರಡಿ ಕೂಡಾ ಇಲ್ಲ.... ಪಕ್ಕದ್ಮನೇಲಿ . ಇರಬಹ್ದು ವಿಚಾರ್ಸಿ.

ಆಗಂತುಕ :.... ಅಲ್ರೀಪ್ಪಾ..... ನಂ ಭಾವ..... ಅಕ್ಕನ ಗಂಡ.... ಗುಡದಿಣ್ಣೆ.... ಹಾರ್ರೀನ್ರೀ....

ನಟರಾಜ್ :— (ಅನುಕಂಪ ತೋರುತ್ತಾ).... ಅಯ್ಯೋ ಪಾಪ ... ನಿಮ್ಮ ಭಾವ ಗುಡ್ಡ.... ದಿಣ್ಣೆ ಹಾರ್ತಾ ಇರ್ತಾರಾ ? ...ಎಲ್ಲೋ ಹುಚ್ಚು ಹಿಡಿದಿರಬೇಕೂಂತ ಕಾಣುತ್ತೆ.

ಆಗಂತುಕ :.... ಅಲ್ರೀ... ನಮ್ಮಭಾವ.... ಪಿ ಡಬ್ಲ್ಯೂಡಿ ಆಫೀಸ್ ದಾಗೆ ಹಾರ್ರಿ ಗುಡದಿಣ್ಣೆ ಅಂತ.

ನಟರಾಜ್ :— (ಅರ್ಥಮಾಡಿಕೊಂಡು)....ಅಯ್ಯೋ.....ಪಿ.ಡಬ್ಲ್ಯೂಡಿ ಆಫೀಸ್‌ನ.... ಮಿ|| ಗುಡ್‌ದಿನ್ನಿ.... ಯೋರ ...

ಹಾಗನ್ನಿ ಮತ್ತೆ ?....ನೋಡಿ....ಇಲ್ಲಿಂದ ಐದ್ನೆ ಮನೆ.

**ಆಗಂತುಕ** :.... ಥೋ..... ಥ್ಯಾಂಕ್ಸ್ ರ್ರಿ.... ನಿಮ್ಗೆ ತ್ರಾಸ್ ಆಯ್ತುರೀ..... ಬರ್ತೀನ್ರೀಪ್ಪ ... (ನಿಷ್ಕ್ರಮಿಸುವನು)

**ನಟರಾಜ್** :— (ಬೇಸರದಿಂದ)..... ನಾನೇನೋ..... ಪ್ರಾಕ್ಟೀಸ್ಗೆ.... ಜನ ಬಂದ್ರೂಂತಿದ್ರೆ.... ಈ ಮಹಾರಾಯ ಬಂದು.... ತಲೆ ಚಿಟ್ಟು ಹಿಡಿಸಿಬಿಟ್ಟ.

(ಹೋಗಿ ಕುರ್ಚಿಯ ಮೇಲೆ ಕೂಡುವನು.... ಹೊರಗೆ ಕೆಮ್ಮಿನ ಶಬ್ಧ ಕೇಳಿಬರುವುದು)

**ನಟರಾಜ್** :— ಯಾರೋ.... ಬಂದ್ಹಾಗಾಯ್ತು..... ಇನ್ನ್ಯಾರು ? ನಮ್ಮೋರಿ.... ಇರ್ಬೇಕು..... ಅಂತು ಸಧ್ಯ ಬಂದ್ರಲ್ಲ.

(ರಾಮಣ್ಣ ಎಂಬ ವ್ಯಕ್ತಿಯ ಪ್ರವೇಶ, ನಟರಾಜ್ ಅವರನ್ನು ಬೇಸರ ದಿಂದ ನೋಡಿ)..... ಏನ್.... ರಾಮಣ್ಣೋರೇ ?

**ರಾಮಣ್ಣ** ಹತ್ನೆ ತಾರೀಖು.... ನ್ಯೂಸ್ ಪೇಪರ್ ಇದ್ಯೆ ?.... ಲಾಟ್ರಿ ರಿಸಲ್ಟ್ ನೋಡಬೇಕಾಗಿತ್ತು.

**ನಟರಾಜ್** :— ತಡೀರಿ (ಒಳ್ಗೋಗಿ ಹುಡುಕಿ ತಂದು ಕೊಡುವನು)

**ರಾಮಣ್ಣ** :.... ನೀವೇ ನೋಡಿ.... ನನ್ಗೆ-ಸರ್ರ್ಯಾಗಿ ಕಾಣಲ್ಲ. (ನಟರಾಜ್ ನಂಬರ್ ಟ್ಯಾಲಿ ಮಾಡಿ, ಟಿಕೇಟ್ ವಾಪಸ್ ಕೊಡುವನು)

**ನಟರಾಜ್** :— ಒಂದ್ನಂಬ್ರೂ.... ಟ್ಯಾಲಿ.... ಆಗಿಲ್ಲ.

**ರಾಮಣ್ಣ** :.... ಬ್ಯಾಡ್‌ಲಕ್.... ಬ್ಯಾಡ್ಲಕ್.... ಬರ್ತೀನಿ. (ಹೋಗುವನು)

**ನಟರಾಜ್** :— (ಬಾಗಿಲು ಹಾಕಿ ವಾಪಸ್ ಬರುತ್ತಾ) ಬರ್ಬೇಡಿ.... **ಹೋಗಿ ಬ್ಯಾಡ್‌ಲಕ್ ಅಂತೆ ಬ್ಯಾಡ್ ಲಕ್**.... **ಬ್ಯಾಡ್‌ಲಕ್**.... ನನಗೆ

(ಹೊರಗೆ ಬಾಗಿಲು ಬಡಿದ ಶಬ್ದವಾಗುವುದು)

ನಟರಾಜ್ :— (ಬೇಸರದಿಂದ) ಯಾರ್ರೀ.... ನಾಟ್ಕದೋರೇನ್ರೀ ನಾಟ್ಕದೋರಾದ್ರೆ.... ಬಾಗಿಲು ತೆಗೀತೀನಿ.

[ಹೊರಗಿನಿಂದ "ನಾನ್ರೀ ಮಹದೇವಪ್ಪ" ಎಂಬ ಶಬ್ದ ಬರುವುದು ... ನಟರಾಜ್ ಹೋಗಿ ಬಾಗಿಲು ತೆಗೆಯುವನು. ಮಹದೇವಪ್ಪ, ಶಂಕ್ರಪ್ಪ, ಭೀಮರಾಯ.... ಫಕ್ರುದ್ದೀನ್ ಬರುವರು]

ನಟರಾಜ್ :- ಏನ್ರಪ್ಪ, ಲೇಟಾಗಿ ಬರೋದ್ರಲ್ಲಿ, ಚಕ್ಕರ್ ಕೊಡೋದ್ರಲ್ಲಿ ಒಂದು ರೆಗ್ಯುಲಾರಿಟಿ ಇರ್ಬೇಕಪ್ಪ.

ಶಂಕ್ರಪ್ಪ :— ಅದ್ರಲ್ಲೂ ಒಂದು ರೆಗ್ಯುಲಾರಿಟೀನೇ.

ನಟರಾಜ್ :- ಹೌದಯ್ಯ ಆಫೀಸ್‌ಗೆ ಆಬ್ಸೆಂಟಾಗೋದಕ್ಕೂ ಒಂದು ರೀತಿ ನೀತಿ ಇದೆ. ಕೆಲವ್ರು ರೆಗ್ಯುಲರ್ಲಿ ಇರೆಗ್ಯುಲರ್.... ಕ್ಯಾತಯ್ಯ ಇದ್ದಾಗೆ... ಪ್ರತಿ ಶನಿವಾರ ಆಫ್ಟರ್ ನೂನ್, ಸೋಮವಾರ ಫೋರ್‌ನೂನ್ ಬರಲ್ಲ. ಇನ್ ಕೆಲವ್ರು.... ಇರ್ರೆಗ್ಯುಲರ್ಲಿ ರೆಗ್ಯುಲರ್.... ಅವ್ರು ಆಬ್ಸೆಂಟ್ ಆದ್ರೆ ಆದ್ದಾಗೇ, ಬರೋದಿಕ್ಕೆ ಶುರು ಮಾಡಿದ್ರೆ, ರೆಗ್ಯುಲರಾಗಿ ಬರ್ತಾ ಇರ್ತಾರೆ. ಆಬ್ಸೆಂಟ್ ಆಗೋಕ್ಕೆ ಶುರುವಾದರೆ.... ಬಂದಾಗ್ಲೇ ಗ್ಯಾರಂಟಿ.... ನಮ್ಮ ಫುಟ್‌ಮಾದು ಇದ್ದ ಹಾಗೆ.... ಇನ್ನು ಲಾಸ್ಟ್ ಕ್ಯಾಟಗರಿ ಇರ್ರೆಗ್ಯುಲರ್ಲಿ ಇರ್ರೆಗ್ಯುಲರ್ ಅವ್ರು ಯಾವಾಗ್ ಬರ್ತಾರೋ ಯಾವಾಗ್ ಆಬ್ಸೆಂಟ್ ಆಗ್ತಾರೋ, ಆ ಬ್ರಹ್ಮನಿಗೂ ಗೊತ್ಮಾಡಾಕಾಗೋಲ್ಲ ....ಎಕ್ಸಾಂಪಲ್ ನೀನು.

ಮಹದೇವಪ್ಪ : ಏನೂ... ಇದೇ ಹೇಳ್ತಾ ಇರ್ತೀರೋ.... ಅಥ್ವಾ.... ಪ್ರಾಕ್ಟೀಸ್ ಶುರು ಮಾಡ್ತೀರೋ ?

ನಟರಾಜ್ :— ಸರಿ, ಫಸ್ಟ್ ಸೀನ್ ಶುರುಮಾಡಿ ಸಾರ್.

(ಶಂಕ್ರಪ್ಪ, ಫಕೃದ್ದೀನ್, ಮಂಚದ ಮೇಲೆ ಕುಳಿತುಕೊಂಡು, ಅವರವರ ಡೈಲಾಗ್ಸನ್ನು ಓದಿಕೊಳ್ಳುತ್ತಿರುವರು)

**ಹದೇವಪ್ಪ :—** ಸ್ವಲ್ಪ ನಿಮ್ಮ ಪುಸ್ತಕಾನ ಕೊಡಿ.

**ಟರಾಜ್ :—** ಯಾಕೆ.... ನಿಮ್ಮ ಸ್ಕ್ರಿಪ್ಟ್ ಏನಾಯ್ತು ?

**ಹದೇವಪ್ಪ :—** ಸ್ಕ್ರಿಪ್ಟ್‌ನ ಶೆಲ್ಫನಲ್ಲಿಟ್ಟಿದ್ದೆ .. ನನ್ನ ಹೆಂಡ್ತಿ ಪೇಪರ್ಸ್ ಜೊತೆ.... ಖಾಲಿಶೀಷೆ.... ಹಳೇ ಪೇಪರ್ ನೋರ್‍ಗೆ... ಗೊತ್ತಿಲ್ದೆ ಮಾರಿಬಿಟ್ಳು..... ಸಾರಿ ನಟರಾಜ್ ನಾಳೆ ಹೊತ್ಗೆ ಬೇರೆ ಬರಿಸ್ತೀನಿ.

**ಟರಾಜ್ :—** (ಬೇಸರದಿಂದ) ಸರಿ..... ತೂಗೊಳ್ಳಿ (ನಟರಾಜ ಪುಸ್ತಕ ಕೊಡುವನು)

**ಹದೇವಪ್ಪ :—** (ಬೇಗ ಬೇಗ ಓದುವರು) ನೋಡಿ..... ಇಂಥ ಮನೆ ನಿಮ್ಗೆ ಈ ಊರೆಲ್ಲಾ ಹುಡುಕಿದ್ರೂ.... ಸಿಗಲ್ಲ .. ಚಿಕ್ಕಾಗಿ ಚೊಕ್ಕಾಗಿ ಹೇಗಿದೆ ನೋಡಿ..... ಬಾಡ್ಗೇ..... ಬರೀ ಜುಜ್ಬಿ.... ಇನ್ನೂರೈವತ್ತು.

**ನಟರಾಜ್ :—** ಹೋಲ್ಡಾನ್.... ಹೋಲ್ಡಾನ್.... ಏನು ?.... ಇಷ್ಟು ಫಾಸ್ಟಾಗಿ ಹೇಳ್ತೀರಾ ? ನಿಧಾನಕ್ಹೇಳಿ.... ನೀವೇನು ಹೇಳ್ತಿದೀರಾ ಅನ್ನೋದು.... ಅರ್ಥವಾಗಬೇಡ್ವೇ ?

**ಮಹದೇವಪ್ಪ :—** ನೋಡಿ.... ಇವತ್ತು ಫಾಸ್ಟಾಗೇ ಹೇಳ್ತೀನಿ.... ನಾಳೆ ಸ್ಲೋ.... ಇವತ್ತು ಮನೇಗೆ ನಮ್ಮ ನೆಂಟ್ರು ಬಂದಿದ್ದಾರೆ.... ಬೇಗ ಹೋಗ್ಬೇಕು.

**ನಟರಾಜ್ :—** ಸರಿಹೋಯ್ತು.... ಹಾಗಂತ ಪುಸ್ತಕ ಓದ್ದಾಗೆ ಫಾಸ್ಟಾಗಿ ಓದೋದೆ ? ನಿಧಾನ್ವಾಗೇ ಓದಿ.... ಬೇಕಾದ್ರೆ.. ಒಂದೇ ಸೀನ್ ಪ್ರಾಕ್ಟೀಸ್ ಮಾಡಿದ್ರಾಯ್ತು.

**ಮಹದೇವಪ್ಪ** :— ಸರಿ (ನಿಧಾನವಾಗಿ ಓದುವರು) ನೋಡಿ.... ಇಂಥ ಮನೆ ನಿಮ್ಗೆ.... ಈ ಊರೆಲ್ಲಾ ಹುಡ್ಕಿದ್ರೂ ಸಿಗಲ್ಲ. ಚಿಕ್ದಾಗಿ.. ಚೊಕ್ಕವಾಗಿ.. ಹೇಗಿವೆ ನೋಡಿ.. ಬಾಡ್ಗೆ.... ಬರೀ ಜುಜ್ಬಿ ಇನ್ನೂರೈವತ್ತು... ಅಡ್ವಾನ್ಸ್.... ಓನ್ಲಿ ಟೆನ್‌ಮಂತ್ಸ್ ರೆಂಟ್.... (ಭೀಮರಾಯ ಸುಮ್ನೆ ಕುಳಿತಿರುವುದನ್ನು ನೋಡಿ)

**ನಟರಾಜ್** :— ರೀ.. ಭೀಮರಾಯ್ರೇ.... ಎಲ್ಲೋಡ್ತಾ ಇದೀರ ನಿಮ್ಮ ಡೈಲಾಗ್ಸ್ ಹೇಳ್ರೀ.

(ಭೀಮರಾಯ ಗಾಬರಿಯಿಂದ ಜೇಬಿಗೆ ಕೈ ಹಾಕಿ, ತಡಕಾಡಿ ಸಿಗ ಒದ್ದಾಡುತ್ತಾ ಇರಲು)

**ನಟರಾಜ್** :— ಯಾಕ್ರೀ ... ಏನ್ ಹುಡುಕುತ್ತಿದ್ದೀರ್ರೀ.... ಸ್ಕ್ರಿಪ್ಟ್ ಎಲ್ರೀ ?

**ಭೀಮರಾಯ** :.. ಸ್ಕ್ರಿಪ್ಟ್... ಮರ್ತು.... ಆಫೀಸ್‌ನಲ್ಲೇ ಇಟ್ಟು ಬಂದೇಂತ ಕಾಣುತ್ತೆ.... ಪುಸ್ತಕ ಕೊಡಿ ಹೇಳ್ತೀನಿ.

(ಮಹದೇವಪ್ಪ ಪುಸ್ತಕ ಕೊಡುವರು. ಭೀಮರಾಯರು ಕನ್ನಡಕಕ್ಕಾಗಿ ಹುಡುಕಾಡಿ ಸಿಗದೆ)

**ಭೀಮರಾಯ** :.... ನಟ್ರಾಜ್.... ಕನ್ನಡಕಾನೇ ಇಲ್ವಲ್ರೀ. ಸ್ವಲ್ಪಾನು ಕಾಣಿಸ್ತಾನೇ ಇಲ್ವಲ್ರೀ.

**ನಟರಾಜ್** :— (ರೇಗಿ) ಯಾತರದ್ರೀ ಇದು ?.... ಒಬ್ರು ಸ್ಕ್ರಿಪ್ಟ್ ಕಳ್ಕೊಂಡ್ರು...... ಇನ್ನೊಬ್ರು ಸ್ಕ್ರಿಪ್ಟ್ ತಂದಿಲ್ಲ.... ಕನ್ನಡಕಾನೂ ತಂದಿಲ್ಲ.....

**ಮಹದೇವಪ್ಪ** :— ನೋಡಿ.... ನನ್ನ ರೋಲ್, ನನ್ನ ಮಾತು ಇರೋದು...... ಭೀಮರಾಯ್ರ ಹತ್ರ,.... ಕ್ಯಾತಯ್ಯ ನ ಹತ್ರಾನೇ ಹೆಚ್ಚು.... ಕ್ಯಾತಯ್ಯ ಬಂದಿಲ್ಲ.... ಭೀಮರಾಯ್ರು ಸ್ಕ್ರಿಪ್ಟ್ ತಂದಿಲ್ಲ.... ಇನ್ನು ಪ್ರಾಕ್ಟೀಸ್ ಹೇಗಾಗುತೆ ? ನಾಳೆ

ಆರೂ ವರೆಗೆ ಬರ್ತೀನಿ...... ಸ್ಕ್ರಿಪ್ಟ್ ಬೇರೆ ಬರ್ಕೊಂಡು.... ಈಗ ನನಗೂ ಮನೇ ಕಡೆ ಧಾವಂತ. ನಿಮ್ಮ ಬುಕ್ ಕೊಟ್ಟಿರಿ.... ಸ್ಕ್ರಿಪ್ಟ್ ಬರ್ಕೋಬೇಕು.

(ನಟರಾಜ್‌ನಿಂದ ಪುಸ್ತಕ ಪಡೆದು ಸುಹದೇವಪ್ಪ ಹೋಗುವರು)

**ಭೀಮರಾಯ** :.... ನಟರಾಜ್.... ನಂಗೇನ್ ಕೆಲ್ಸ...... ನಾನು ಹಾಗಾದ್ರೆ ಫ್ಯಾಕ್ಟ್ರೀಗೆ ಹೋಗ್ತೀನಿ.

**ಫಕ್ರುದ್ದೀನ್** :— ರಾತ್ರಿ ಎಂಟೂವರೇಲಿ.... ಫ್ಯಾಕ್ಟ್ರೀಮೆ.... ಕ್ಯಾ ಕಾಂ ಹೈ ಜೀ ತುಮ್ಕೂ .. ಮನೆಗೆ ಹೋತೀನಿ ಕರ್ಕೊ ಬೋಲ್.

**ಭೀಮರಾಯ** : ಹಾಗಂದನೇ ... ಅಯ್ಯೋ ಶರ್ಮ.... ಫ್ಯಾಕ್ಟ್ರೀಗಲ್ಲ.... ಮನೇಗ್ಹೋಗ್ತೀನಿ (ನಿಷ್ಕ್ರಮಣ)

**ಶಂಕ್ರಪ್ಪ** :— ಒಳ್ಳೇ ಕನ್‌ಫ್ಯೂಸಿಂಗ್ ಮಾಸ್ಟರ್ ನಾಲ್ಕನೇ ಸೀನ್ .. ತೊಗೊಳ್ಳೋಣ.

**ನಟರಾಜ್** :— ಅದಕ್ಕೆ ಕ್ಯಾತಯ್ಯ ಇರ್ಬೇಕಲ್ಲ? ಹಾ ಆ ದೋನು ಎಲ್ಹೋದ ?

**ಫಕ್ರುದ್ದೀನ್** :— ಅವನ್ಗೆ ಇವತ್ತು .. ಇಸ್ಪೋರ್ಟ್ಸ್ ಕ್ಲಬ್‌ದಾಗೆ.... ಮೀಟಿಂಗ್ ಅಂತೆ, ನನ್ಹತ್ರ.... "ಪ್ರಾಕ್ಟೀಸ್‌ಗೆ ಬರಾಕಾಗಲ್ಲ" ಅಂತ ಅನ್ನೇ ಹೇಳ್ದ.

**ನಟರಾಜ್** :— ಹೋಗ್ಲಿ.... ಶಂಕ್ರಪ್ಪ......ಶುರು ಮಾಡು...... ಕ್ಯಾಚ್ ವರ್ಡ್ಸ್ ನಾನೇ ಕೊಡ್ತೀನಿ.....

**ಶಂಕ್ರಪ್ಪ** :— (ಡೈಲಾಗ್ಸ್ ಹೇಳುತ್ತಾ) "ಯಾವ್ ಸೀಮೆ ಬ್ರೋಕರ್ ಕೆಲ್ಸ ಮಾಡ್ತೀಯಯ್ಯ ? ನಮ್ಮಪ್ಪಂಗೂ ಬುದ್ಧಿ ಇಲ್ಲ ... ಅನ್ನಿಗೆ ಜಾಡ್ಗೆ ಬಂದ್ರಾಯ್ತು.... ಅಲ್ಲ ... ಬಾಡ್ಗೇಗೆ ಬರೋಣ ಮನೇಲಿ.... ಒಳ್ಳೇ....

ಫೈ ಕ್ಲಾಸ್-ಕಾಲೇಜ್ ಹುಡ್ಗಿ ಇರ್ಲಿ ಅಂತ ನಾವು ಹೇಳಿದ್ರೆ.... ಇವನ್ಯಾರ್ನೋ ಹಿಡ್ಕೊಂಡು ಬಂದ್ನಲ್ಲ.... ನಿಂಗೆ ಮಹಾವಸ್ತು ರೂಪಾಯಿ ಕಮಿಷನ್ ಬೇರೆ ಕೊಟ್ಟಿದ್ದಾಯ್ತು.

**ನಟರಾಜ್** :.... (ಕ್ಯಾತಯ್ಯನ ಡೈಲಾಗ್ಸ್ ಹೇಳುತ್ತಾ) ಅದ್ಯಾಕ್ ಸಾರ್ ಹಾಗ್ಹೇಳ್ತೀರಾ ?.... ಅವ್ರ ಮನೇಲೂ ನೀವ್ ಹೇಳ್ದ ಹಾಗೆ ಕಾಲೇಜ್ ಹುಡ್ಗಿ ಇದಾಳಲ್ಲ.

**ಶಂಕ್ರಪ್ಪ** :— ಇದಾಳಪ್ಪಾ ... ಇದಾಳೆ.... ಒಳ್ಳೆ ರತಿ ಇದ್ದ ಹಾಗೆ. ಮೆಳ್ಳಗಣ್ಣು...... ಉಬ್ಬು ಹಲ್ಲೂ..... ಒಳ್ಳೇ ಕಟಿಂಗ್ ಪ್ಲೇಯರ್ ಇದ್ದಾಗಿದೆ..... ಹೋಗ್ಲಿ...... ಇನ್ನು ಆ ಹಂಸದ ನಡಿಗೆ (ಕುಂಟಿ, ಕುಂಟಿ ತೋರಿಸುತ್ತಾ) ... ಹ್ಯಾಗಿದೆಯೋ ? ಹೋಗ್ಲಿ.... ಈಗ ಖಾಲಿ ಆಗಿದೆ ಯಲ್ಲಾ .. ಆ ಮನೆಗಾದ್ರೂ.... ನಾನ್ಹೇಳ್ದಂಥ ಹುಡುಗಿ ಇರೋರ್ನ ತಂದು ಸೇರಿಸಬೇಕು ತಿಳೀತಾ.... ನಿನ್ನ ದಮ್ಮಯ್ಯ.... ನಮ್ಮಪ್ಪಂಗೆ... ನಾನು ಹೀಗೆ ಹೀಳ್ದೆ ಅಂತ .. ಹೇಳೀಯ ಮಾರಾಯ.

(ಶಂಕ್ರಪ್ಪ ಡೈಲಾಗ್ಸ್ ಮುಗಿಸುವನು, ನಟರಾಜ್ ಮುಂದಿನ ಡೈಲಾಗ್ ತಿಳಿಯದೆ)

**ನಟರಾಜ್** :.... (ಹುಡುಕುತ್ತಾ) ಮುಂದಿನ ಡೈಲಾಗ್ಸ್....ಏನಪ್ಪ..... ಡ್ರಾಮ ಬುಕ್ ಎಲ್ಹೋಯ್ತು ?

**ಶಂಕ್ರಪ್ಪ** :— ಮಹದೇವಪ್ಪನಿಗೆ ಕೊಟ್ಟರಲ್ರೀ....

**ನಟರಾಜ್** :.... ಸರ್ಹೋಯ್ತು.... ಅವರಿಗೆ ಕೊಟ್ಟು.... ಈಗ ನಾನ್ಹೇಗೆ ಕ್ಯಾತಯ್ಯನ ಕ್ಯಾಚ್ ವರ್ಡ್ಸ್ ಕೊಡೋದು..... ಶಂಕ್ರಪ್ಪ.... ಈಗ ಆಗಲ್ಲಪ್ಪ.

**ಫಕ್ರುದ್ದೀನ್** :— ಹಂಗಾರೆ.... ನನ್ನ ಡೈಲಾಗ್ ಥೋಡಾ ಸುನೋಜಿ....

**ನಟರಾಜ್ :......** ನಿಮ್ಮದಕ್ಕೆ ... ಮಹದೇವಪ್ಪ ಇರ್ಬೇಕಲ್ಲಾ.... ಅವ್ರು ಹೋದ್ರಲ್ಲ ... ಆಯ್ತು ಯಾವ್ದಾದ್ರೂ ಒಂದು ಡೈಲಾಗ್ ಹೇಳಿ....

**ಫಕ್ರುದ್ದೀನ್ :—** "ಅರೆ ಇಸ್ಕಿ...... ಈ ಹಳೆ ಡಬ್ಬದ ಟ್ಯಾಕ್ಸೀನ ತೊಗೊಂಡು ಬೆಂಕೀಗೆ ಹಾಕ್ಬೇಕು ? ... ನಮ್ದೂಗೆ ಸವ್ವಾರ್‍ಗೆ.... ಏಳಿ.... ಏಳಿ ಸಾಕಾಯ್ತು...... ಇಸ್ಟೇ ರಿಂಗ್ ಅಲ್ಲಾಡ್ತದೆ....ಗಾಡಿ ಒಳ್ಗೇ ಕುಡ್ದೋರಂಗೆ.... ಎತ್ತೆತ್ಲೋ.... ಓಗ್ತೈತೆ."

**ನಟರಾಜ್** ನಿಮ್ಮ ಪಾರ್ಟ್‌ಗೇನು.... ಹೆಚ್ಗೆ ಡೈರೆಕ್ಷನ್ಸ್ ಬೇಕಿಲ್ಲ.... ನ್ಯಾಚುರಲ್ಲಾಗೇ ಬರ್‍ತಾ ಇದೆ.

**ಶಂಕ್ರಪ್ಪ :-** ಆ ಪುಟ್ಟಮಾದ.... ಯಾಕೆ ಒಂದಿನ ಬಂದ್ರೆ ಒಂದಿನ ಬರಲ್ಲ ?.... ಕೆಲ್ಸಕ್ಕೂ ಬರೋಲ್ಲ .. ಲೀವ್ ಎಕ್ಸ್‌ಟೆಂಡ್ ಮಾಡ್ತಾನೇ ಇದಾನೆ...... ಅವನ ಬದಲು ಬೇರೆ ಯಾರ್‍ನಾದ್ರೂ.... ನೋಡ್ರಿ...... ನಟ್ರಾಜ್

**ನಟರಾಜ್** ಅವನ್ದೇನೂ ಯೋಚ್ನೆ ಇಲ್ಲ.... ಡೈಲಾಗ್ಸ್ ನ್ಯಾಚುರಲ್ಲಾಗೇ ಹೇಳ್ತಾನೆ.... ಯಾವ್ದೋ ಹಳ್ಳೀಗೆ ಹೋಗಿದ್ದಾನೆ ......ಹಸುಕೊಂಡು ಬರೋದಿಕ್ಕೆ ... ನಾಳೆ ಬರ್‍ತಾನೆ.

**ಫಕ್ರುದ್ದೀನ್** ಹಂಗಾರೆ .. ಇವತ್ತಿಂದು ಪ್ರಾಕ್ಟೀಸ್ ಬಂದ್‌ಕ್ಯಾ ?

**ನಟರಾಜ್** ಇನ್ನೇನು.... ಮುಗ್ದ್ಹಾಗೇ.... ಮಹದೇವಪ್ಪ, ಭೀಮ್ರಾಯ್ರು ವಾಪಸ್ ಹೋದ್ರು.... ಕ್ಯಾತ, ಪುಟ್ಟಮಾದ ಬಂದಿಲ್ಲ.... ಹೋಗ್ಲಿ ನಾಳೆ ಎಲ್ಲಾ ಸರಿಯಾದ ಟೈಂಗೆ ಬನ್ನಿ.... ಫಕ್ರುದ್ದೀನ್.... ನೀವು ಸ್ವಲ್ಪ ಕ್ಯಾತಯ್ಯನಿಗೆ ಸರ್‍ಯಾಗೆ ಹೇಳಿ.... ನಾನು ಹೇಳೀ ಹೇಳೀ ಸಾಕಾಯ್ತು.

**ಶಂಕ್ರಪ್ಪ** :— ಹಾಗಾಡ್ರೆ ನಾವಿನ್ನು ಬರ್ತೀವಿ.
(ಇಬ್ಬರೂ ನಿಷ್ಕ್ರಮಿಸುವರು)

**ನಟರಾಜ್** :— ದಿನಾ ಹೀಗೇ ಆಗ್ತಾ ಇದ್ರೆ ಹೇಗೆ.... ಒಂದು ದಿನ ವಾದ್ರೂ ಫುಲ್ ಪ್ರಾಕ್ಟೀಸ್ ಆಗಿಲ್ಲ.... ಹೀಗಾದ್ರಾಗಲ್ಲ.... ನಾಳೆಯಿಂದ ಸೀರಿಯಸ್ಸಾಗಿ, ಸ್ಟ್ರಿಕ್ಟ್ ಆಗಿ ಪ್ರಾಕ್ಟೀಸ್ ಆಗ್ಲೇಬೇಕು.

(ತೆರೆ ಸರಿಯುವುದು)

## ದೃಶ್ಯ ೫

## (ರಸ್ತೆ ದೃಶ್ಯ)

(ನಟರಾಜ್ ಹೋಗುತ್ತಿದ್ದಾನೆ. ಎದುರಿನಿಂದ ವೆಂಕಣ್ಣನ ಪ್ರವೇಶ)

**ವೆಂಕಣ್ಣ** :— ನಮಸ್ಕಾರ ನಾಟಕದ ನಟರಾಜ್‌ಗೆ.

**ನಟರಾಜ್** :— (ಸಂತೋಷದಿಂದ ವೆಂಕಣ್ಣನ ಕೈ ಕುಲುಕುತ್ತಾ) ನಮಸ್ಕಾರ.... ನಮಸ್ಕಾರ.... ವೇಟ್ರನ್ ವೆಂಕಣ್ಣೋರ್ಗೆ .. ಚೆನ್ನಾಗಿದೀರಾ ?

**ವೆಂಕಣ್ಣ** :— ಚೆನ್ನಾಗಿದೀರಾ ಅಂತ ಕೇಳ್ಬೇಡಿ..... ಇದೀರಾ.... ಇನ್ನೂ ಸಾಯ್ದೆ.... ಅಂತ್ಕೇಳಿ.

**ನಟರಾಜ್** :— ಯಾ ಕ್ರೀ.... ಹಾಗ್ಹೇಳ್ತೀರಾ.... ಈಗ ಯಾವ ಕಂಪ್ನೀಲಿದೀರಾ ?..... ಯಾವೂರು ಕ್ಯಾಂಪು ?..... ನಾಟ್ಕ ಯಾವ್ದು ?

**ವೆಂಕಣ್ಣ** :- ಅಲ್ರೀ.... ನಾಟಕದೋರು ಎಲ್ಲಾದ್ರೂ ಸುಖವಾಗಿ ಇರುವುದಕ್ಕಾಗತ್ಯೇ ಹೇಳಿ ?
....ದುರ್ಗದ ದುಗ್ಗಪ್ಪನೋರ ಕಂಪ್ನೀಲಿ ದಶಾವತಾರ

ನಾಟಕ ಆಡ್ತಾ ಇದ್ವಿ ... ದುರ್ಗದ ಕ್ಯಾಂಪ್ ಮುಗಿ
... ಹರಿಹರಕ್ಕೆ ಬಂದ್ವಿ ... ಹರಿಹರದಲ್ಲಿ
ಹಟ-ಹಟಾ.... ಅಂತು. ಸಾಲಕೊಟ್ಟೋರು
ಬಂದು.... ಕಂಪ್ನಿ ಸಾಮಾನ್ನೆಲ್ಲಾ ಸೀಜ್
ಮಾಡ್ಬಿದ್ರು..... ಈಗ ನೋಡಿ...... ಊರ್ಗೆ ಬಂದು
ಲಾಟ್ರೀ ಹೊಡೀತಾ ಇದೀನಿ.

ನಟರಾಜ್ :— ನಿಮ್ಗೇನ್ ಯೋಚ್ನೆ ಇಲ್ಲ ಬಿಡಿ ... ವೇಟ್ರನ್ ಆಕ್ಟರ್ ಅಂತ ಹೆಸರು ಮಾಡಿದೀರಾ...... ಯಾರಾದ್ರೂ ಕಾಲ್ಗೆ ಬಿದ್ದು ಕಂಪ್ನೀ ಸೇರಿಸಿಕೊಳ್ತಾರೆ.

ವೆಂಕಣ್ಣ :- ಅಂದ್ಹಾಗೆ .. ನೀವೇನೋ ನಾಟ್ಕ ಶುರು ಮಾಡ್ಬಿದ್ದೀರಂತೆ ? ನೀವೇನಪ್ಪ.... ನಾಟ್ಕ.... ಕಲೆ ಅಂತ .. ತಲೆಕೆಡಿಸಿಕೊಳಕ್ತಾನೇ ಇರ್‍ತೀರ.

ನಟರಾಜ್ :— ತಲೆ ಕೆಡ್ಸಿಕೊಳ್ಳೋಕೆ.... ತಲೆ ಉಳ್ದಿದ್ರೆ ತಾನೇ ?.. ಎಲ್ಲಾ ಅಗ್ಲೆ ಕೆಟ್ಟು ಗೊಬ್ರ ಆಗ್ಹೋಗಿದೆ.

ವೆಂಕಣ್ಣ :— ಏನ್ ತಾಪತ್ರಯ.

ನಟರಾಜ್ :— ಇನ್ನೇನು ಸ್ವಾಮಿ ? ... ನಮ್ಮ ಆಫೀಸ್‌ನೋರ್ನೇ ಕಟ್ಕೊಂಡು ... ನಾಟ್ಕ ಆಡೋಣಾ ಅಂತ.... ಸುಮಾರು ಒಂದು ತಿಂಗ್ಳಿಂದ ಪ್ರಾಕ್ಟೀಸ್ ಮಾಡಸ್ತಾ ಇದೀನಿ ... ಅವ್ರಿಗೆ ಬರಲ್ಲ.... ನಂಗೆ ಮರೆಯಲ್ಲ ... ನಮ್ಮಪ್ಪನಾಣೆಗೂ.... ಬರ್‍ತಾರಾದ್ರೂ ಸಾಯ್ಕಾಗ.... ಪ್ರಾಕ್ಟೀಸ್‌ಗೆ ಬರ್‍ತಾರೆ ಅಂತೀರಾ ?.... ಒಳ್ಳೇ ಕಪ್ಪೆ ತಕ್ಕೀಗ್ಹಾಕ್ದಾಗೆ ಆಗಿದೆ

ವೆಂಕಣ್ಣ :— ಅದಕ್ಕೋಸ್ಕರ..... ನಮ್ಮಪ್ಪ ಹೇಳ್ತಿದ್ದ, "ನಾಟ್ಕ ಆಡೋದಕ್ಕಿಂತ.... ಬಟ್ಟೆ ಹೊಡೆಯೋದೇ ಮೇಲೂ ಅಂತ".... ಕಂಪ್ನೀ ನಾಟ್ಕಗಳಲ್ಲೇ.... ಸಂಬ್ಳ ಕೊಗೊಳ್ಳೋ

ಪಾರ್ಟುದಾರರೇ .. ಸ ರಿ ಯಾ ಗಿ ಪ್ರಾಕ್ಟೀಸ್‌ಗೆ ಬರೋಲ್ಲ.... ಅಂಥಾದ್ರಲ್ಲಿ.... ಕೆಲ್ಸದಲ್ಲಿ ಇರೋ ರನ್ನ .. ಕಟ್ಕೊಂಡು ... ಹೆಣ್ಗೋದೂ ಅಂದ್ರೆ .. ಕಷ್ಟಾನೇ ಅನ್ನಿ.

**ನಟರಾಜ್ :—** ಸ್ಕ್ರಿಪ್ಟ್ .. ಬರ್ದ್ಕೊಳೋ ಹೊತ್ಗೆ ಇಪ್ಪತ್ತು ದಿನ ತೊಗೊಂಡ್ರು. ಒಂ ದು ತಿಂಗ್ಳ ಮೇಲಾಯ್ತು ಪ್ರಾಕ್ಟೀಸ್ ಶುರು ಮಾಡಿ. ಇವತ್ಗೆ ಸರ್ಯಾಗಿ.... ಒಂದು ವಾರಕ್ಕೆ ಈ ಊರ ರಾಮ ಮಂದಿರದಲ್ಲಿ ನಾಟ್ಕ .. ಡೇಟ್ ಫಿಕ್ಸ್ ಮಾಡಿ, ಸೀನ್ಸ್‌ನೋರ್ಗೆ ... ಮೈಕ್‌ಗೆ, ಮೇಕಪ್‌ಗೆ.... ಎ ಲ್ಲಾ ದ ಕ್ಕೂ ಅಡ್ವಾನ್ಸ್ ಕೊಟ್ಟಾಗಿದೆ .. ಒಬ್ರಾದ್ರೂ ಡೈಲಾಗ್ ಸರಿಯಾಗಿ ಹೇಳಲ್ಲ .. ಇನ್ನು ಆ ಮಾತಾಡೋ ರೀತೀನೋ ದೇವ್ರೇ ಕಾಪಾಡ್ಬೇಕು .. ಒಬ್ಬ ಇವ್ರ ಪೈಕಿ ಫುಟ್‌ಬಾಲ್ ಪ್ಲೇಯರ್ .. ಮಾತೆ ತ್ತಿದ್ರೆ... ಆಮ್ಯಾಚೂ..... ಇಲ್ಲಿ ಮ್ಯಾಚೂಂತ .. ಒಂದಿನ ಬಂದ್ರೆ ಒಂದಿನ ಬರಲ್ಲ..... ಇನ್ನೊಬ್ರು ಕನ್ ಫ್ಯೂಸಿಂಗ್ ಮಾಸ್ಟರ್ .. ಯಾವ್ದೋ ಸೀನ್‌ನಲ್ಲಿ..... ಇನ್ಯಾವ್ದೋ ಸೀನ್‌ನ ಡೈಲಾಗ್ಸ್ ಶುರುಮಾಡ್ತಾರೆ ... ಹೀ ಗೆ ಒಬ್ಬೊಬ್ಬರ್ದ್ದು.... ಒಂದೊಂದುಥರ ... ಅದಕ್ಕೇ ನಾಳೆಯಿಂದ ಶತಾಯ ಗತಾಯ ... ದಿನಾ ಡಬ್ಬಲ್ ಪ್ರಾಕ್ಟೀಸ್.... ಅಂತ ಹೇಳಿದ್ದೀನಿ.

**ವೆಂಕಣ್ಣ :—** ಅಂದ್ಹಾಗೆ..... ಮೇಕಪ್‌ಗೆ ಹೇಳಿದೀನಿ ಅಂದ್ರಲ್ಲಾ..... ಕ್ಯಾನ್ಸಲ್ ಮಾಡಿ .. ನಾನೇ ಮೇಕಪ್ ಮಾಡಿ ಕೊಡ್ತೀನಿ.... ಹೆಚ್ಚು...... ಕಮ್ಮಿ...... ಅದೇ ದುಡ್ನನ್ನ ನಂಗೆ ಕೊಡಿ .. ನಾನೂ ತಾಪತ್ರಯದಲ್ಲಿದ್ದೀನಿ.

**ನಟರಾಜ್ :—** ಆಯ್ತು .. ಸೋ ಡೋ ಣ.... ಸಾಯಂಕಾಲದ ಹೊ ತ್ತು ಮನೇಲಿದ್ದು.... ಏನ್ಮಾಡ್ತೀರಾ ? ..

ರೂಂ..... ಕಡೆ ಬನ್ನಿ ... ಪ್ರಾಕ್ಟೀಸ್ ಇರತ್ತೆ... ನಂಗೂ ಹೆಲ್ಪ್ ಮಾಡ್ದ ಹಾಗಾಗುತ್ತೆ. ಅಂತೂ ಈ ನಾಟಕದ ಗೀಳು.. ಬಹಳ ಕೆಟ್ಟದ್ದು. ವೆಂಕಣ್ಣ.... 'ಬಿಟ್ಟೇನೆಂದರು ಬಿಡದೀಮಾಯೆ' ಅನ್ನೋಹಾಗೆ, ಬಿಡಕ್ಕೂ ಮನಸ್ಸರಲ್ಲ.... ಕಟ್ಕೊಂಡು ಸಾಯಕ್ಕೂ ಆಗೋಲ್ಲ.

ವೆಂಕಣ್ಣ :— ಇಷ್ಟಕ್ಕೇ .. ಹೀಗೆ ಹೇಳ್ತೀರಲ್ಲಾ ... ಒಂದೊಂದು ಸಲ ದೊಡ್ಡ ದೊಡ್ಡ ಕಂಪ್ನೀಲೇ, ಮೇಕಪ್ ಮಾಡ್ಕೊಂಡು, ಒಂದು ಸೀನ್‌ನಲ್ಲಿ ಪಾರ್ಟ್ ಮಾಡಿ .. ಮುಂದಿನ ಸೀನ್ ಹೊತ್ಗೆ .. ಮೇಕಪ್ ಪರ್ಸ್ಸಿ .. ನಾಪತ್ತೆ ... ಆಗ್ತಾರೆ ಗೊತ್ತಾ? ಹೇಗಿರ್ಬೇಡಾ .. ಕಂಪ್ನಿ ಮಾಲೀಕನ ಪಾಡು .. ರೀ .. ನಟರಾಜ್ .. ನೀವು ಬೇಜಾರು ಪಟ್ಕೊಳ್ಳದಿದ್ರೆ .. ಒಂದು ಇಪ್ಪತ್ತು ರೂಪಾಯಿ ಇದ್ರೆ ಕೊಡ್ತೀರಾ ... ಅರ್ಜೆಂಟ್ ಬೇಕಿತ್ತು..... ಮೇಕಪ್ ದುಡ್ಡಿನಲ್ಲಿ ವಜಾ ಮಾಡ್ಕೊಳ್ಳಿ.

ನಟರಾಜ್ :— ಇರೋಹಾಗಿಲ್ಲ.... ತಡೀರಿ.... ನೋಡ್ತೀನಿ ... (ಜೇಬೆಲ್ಲಾ ತಡಕಾಡಿ ಇಪ್ಪತ್ತು ರೂಪಾಯಿ ಜೊತೆ ಮಾಡಿ ಕೊಡುತ್ತಾ) . ಸಾಯಂಕಾಲ ಬರೋದು ಮರೀಬೇಡಿ.

ವೆಂಕಣ್ಣ :— (ಹಣ ಪಡೆಯುತ್ತಾ) . ಹ್ಹಿ.... ಹ್ಹೀ.... ಬಹಳ ಉಪಕಾರವಾಯ್ತು.... ಸಾಯಂಕಾಲ ರೂಂ ಹತ್ರ ಬರ್ತೀನೆ (ನಿಷ್ಕ್ರಮಣ)

ನಟರಾಜ್ :— ಬೆಳಿಗ್ಗೆ.... ಬೆಳಿಗ್ಗೆ.... ಒಳ್ಳೇ ಗಿರಾಕಿ ಸಿಕ್ದನಲ್ಲಾ.... ಇರ್ಲಿ.... ಇರ್ಲಿ ... ಅವನ ಸಹಾಯ.... ಈಗ ಬೇಕೇ ಬೇಕು.

(ಎದುರಿನಿಂದ ಭೀಮರಾಯರು, ಒಂದು ಕೈನಲ್ಲಿ ಸೂಟ್‌ಕೇಸ್, ಇನ್ನೊಂದು ಕೈನಲ್ಲಿ ಬ್ಯಾಗ್, ಕೊಂಕಳಲ್ಲಿ ಛತ್ರಿ ಸಿಕ್ಕಿಸಿಕೊಂಡು ಪ್ರವೇಶಿಸುವರು)

**ನಟರಾಜ್ :—** ಇದೇನ್ರೀ.... ಭೀಮರಾಯ್ರೇ..... ಪ್ರಯಾಣ ಹೊರಟ ಹಾಗಿದೆ ?

**ಭೀಮರಾಯ :—** ನಿಮ್ಮ ರೂಮ್ಗೆ.... ಹೋಗಿದ್ದೆ... ನೀವಿರಲಿಲ್ಲ.... ಸಾಗರದಲ್ಲಿ.... ನನ್ನ ಗಂಡನ ತಂಗೀಗೆ.... ಹಾರ್ಟ್ ಅಟ್ಯಾಕ್ ಆಗಿ.. ತೀರ್ಕೊಂಡ್ರು .. ಅರ್ಜೆಂಟ್ ಹೋಗ್ತಾ ಇದೀನಿ.

**ನಟರಾಜ್ :—** (ಅರ್ಥವಾಗದೆ).... ಏನೂ ?...... ನಿಮ್ಮ ಗಂಡನ ತಂಗೀನೇ.... ಏನ್ರೀ ... ಹಾಗಂದ್ರೆ ?

**ಭೀಮರಾಯ :-** ಅಯ್ಯೋ... ಹಾಗಂದ್ನೇ... ಕರ್ಮ.... ನನ್ನ ತಂಗೀ ಗಂಡ ಹಾರ್ಟ್ ಅಟ್ಯಾಕ್ ಆಗಿ..... ಸಾಗರದಲ್ಲಿ ತೀರ್ಕೊಂಡ್ರು.... ಅದಕ್ಕೇ ಹೋಗ್ತಾ ಇದೀನಿ.

**ನಟರಾಜ್ :—** (ಬೇಸರದಿಂದ) ಸಾರಿ.... ಟು .. ಹಿಯರ್...... ಬೇಗ ಬಂದ್ಬಿಡಿ..... ನಾಟ್ಕಕ್ಕೆ.... ಇನ್ನೊಂದ್ವಾರ ಉಳ್ದಿದೆ.

**ಭೀಮರಾಯ :-** ಕ್ಷಮಿಸ್ಸಿ....ನಾನು ಸದ್ಯಕ್ಕೆ ಬರೋಹಾಗಿಲ್ಲ.... ತಿಥಿ.... ಮತ್ತಿ, ಎಲ್ಲಾ ಮುಗೀಬೇಕು...... ಅದೂ ಅಲ್ದೆ.... ನಮ್ಮ ಬೀಗರು ಘಾಟಿ ಜನ.... ನಾವು ತೆಪ್ಪಿದ್ರೆ.... ನನ್ನ ತಂಗೀ ಕೈಗೆ ಚಿಪ್ಪುಕೊಡ್ತಾರೆ, ಅಷ್ಟೆ.... ಅಲ್ಲೇ ಇನ್ನೊಂದು, ಮೂರ್ನಾಕು.... ತಿಂಗ್ಳಿದ್ದು..... ಆಸ್ತಿ ವಿಚಾರ ಎಲ್ಲಾ ಸೆಟ್ಲ್‌ಮಾಡ್ಸಿ.... ಬರ್ಬೇಕು. ಹೊತ್ತಾಯ್ತು.... ನಾನಿನ್ನು ಬರ್ತೀನೆ.... ಬಸ್, ಮಿಸ್ ಆದ್ರೆ.... ಆಮೇಲೆ ಮುಖಾನೂ ಸಿಗೋಲ್ಲ. . (ನಿಷ್ಕ್ರಮಣ)

**ನಟರಾಜ್ :—** (ಖಿನ್ನನಾಗಿ)...... ಆಯ್ತಲ್ಲ .. ನಾಟ್ಕ ಆಡಿದ್ದು ? . ಒಳ್ಳೇ .. ಮೇಜರ್ ರೋಲ್‌ನೋನೇ ಕೈ ಕೊಟ್ನಲ್ಲಪ್ಪಾ .. (ತಲೆಯ ಮೇಲೆ ಕೈ ಹೊತ್ತು) .. ನಾಟಕದ... ಜೀವಾಳಾನೇ ಹೋದ ಹಾಗಾಯ್ತು ..ಇನ್ನ ಭಾವಪ್ರೈದ, ಸತ್ಯೋನು . ಸತ್ತ .. ನಮ್ಮ ನಾಟ್ಕ.... ಮುಗ್ದಮೇಲಾದ್ರೂ .. ಸಾಯ್ಬಾರ್ದಾಗಿತ್ತೇ.... (ಗಡಿಯಾರ ನೋಡಿಕೊಂಡು) ... ಅಯ್ಯೋ..... ಆಗ್ಲೇ ಹನ್ನೊಂದು ಗಂಟೆ ಆಯ್ತಲ್ಲಾ.... ಆಫೀಸ್ಗೆ .. ಲೇಟಾಯ್ತು . (ನಡೆಯಲು ಹೋಗಿ ತಟ್ಟಾಡುವನು)...... ಯಾಕೆ? ಕಣ್ಣೇ ಕತ್ಲೆ ಇಟ್ಕೊತಾ ಇದೆಯಲ್ಲ. (ನಿಧಾನವಾಗಿ ಸಾವರಿಸಿಕೊಂಡು ಮುಂದೆ ಹೋಗುವನು)

**—: ತೆರೆ ಸರಿಯುವುದು :—**

# ದೃಶ್ಯ ೬

## (ಕಛೇರಿ ದೃಶ್ಯ)

[ನಟರಾಜ್ ನಿಧಾನವಾಗಿ ಪ್ರವೇಶಿಸುತ್ತಾನೆ. ಕ್ಯಾತಯ್ಯನನ್ನು ಬಿಟ್ಟು, ಉಳಿದವರೆಲ್ಲಾ ಕುಳಿತಿದ್ದಾರೆ]

**ಮಹದೇವಪ್ಪ :—** ಏನ್ರೀ ನಟರಾಜ್.... ಇಷ್ಟು ಲೇಟು ?

**ನಟರಾಜ್ :—** ಯಾಕೋ ಹುಷಾರಿಲ್ಲಾ ಸಾರ್ ... (ಸ್ವಗತ) ಪ್ರಾಕ್ಟೀಸ್‌ಗೆ ಗಂಟೆಗಟ್ಲೆ ಲೇಟಾಗಿ ಬರ್ತಾರೆ. ಕೇಳಿದ್ರೆ ಇವ್ರಿಗೆ.... ಬೇಜಾರಾಗುತ್ತೆ.... ಏನೋ ... ಆಫೀಸ್ಗೆ ಬರೋದು ಸ್ವಲ್ಪ ಲೇಟಾದ್ರೆ....ಹಾರಾಡುತ್ತೆ ಪ್ರಾಣ (ಪುನಃ ಮಾಮೂಲು ಧ್ವನಿಯಲ್ಲಿ) ... ನಂದೇನೋ ಲೇಟಾಯ್ತು.... ಸರಿ.... ಆದ್ರೆ....

ಕ್ಯಾತಯ್ಯ....ನಿನ್ನೇನೇ ಬರ್ಬೇಕಾದೋನು.... ಇನ್ನೂ ಬಂದಿಲ್ವಲ್ಲ.... ಅವನ್ಯಾರೂ ಕೇಳೋರೆ ಇಲ್ವಾ ?

**ಶಂಕ್ರಪ್ಪ** :— ಅವ್ನು ಸದ್ಯಕ್ಕೆ.... ಬಂದ್ಹಾಗೇ ಇದೆ.

**ಫಕೃದ್ದೀನ್** :— ಪಾಪ.... ಐಸ ನೈ ಹೋ ನಾತಾ ..

**ನಟರಾಜ್** :— (ಆಶ್ಚರ್ಯದಿಂದ)... ಏನಾಯ್ತ್ರಪ್ಪ... ಸರ್ಯಾಗಿ ಹೇಳಿ.

**ಮಹದೇವಪ್ಪ** ಮೊನ್ನೆ.... ದಾವಣಗೆರೆಗೆ ಫುಟ್‌ಬಾಲ್ ಮ್ಯಾಚ್ಗೆ ಹೋಗಿದ್ನಲ್ಲ.... ಬಿದ್ದು ಕಾಲ್ಮುರ್ದು ಹೋಗಿದೆಯಂತೆ .... ಅಲ್ಲೇ...... ಹಾಸ್ಪಿಟಲ್‌ಗೆ ಅಡ್ಮಿಟ್ ಮಾಡಿದಾರೇ ಅಂತ ಟೆಲಿಗ್ರಾಂ ಬಂತು...... ಮಾಮೂಲು ಸ್ಥಿತಿಗೆ ಬರೋಕೆ.... ಇನ್ನೂ ಬಹಳ ದಿನ ಬೇಕಾಗ್ತೋದು . ಪಾಪ ... ಸ್ಪೋರ್ಟ್ಸ್‌ನಲ್ಲೇ ಜೀವ ಇಟ್ಕೊಂಡಿದ್ದ... ಇನ್ನು ಫುಟ್‌ಬಾಲ್ ಆಡ್ದಂಗೇ ಇದೆ.

**ನಟರಾಜ್** :— ಛೇ ... ಛೇ .. (ಬೇಸರದಿಂದ ಟೇಬಲ್ ಮೇಲೆ ಕುಸಿದು ಬೀಳುವನು)

**ಮಹದೇವಪ್ಪ** (ಗಾಬರಿಯಿಂದ) ರೀ.... ರೀ.... ಏನಾಯ್ತ್ರೀ ? ಏಳ್ರೀ... ಯಾಕೆ ಅಷ್ಟು ಗಾಬ್ರಿ ಆಗ್ತೀರಾ ? ... ಎಂತೆಂಥಾ.... ಫ್ರಾಕ್ಚರ್ಸ್‌ನೇ ಸೆಟ್ ಮಾಡ್ತಾರೆ .. ಇವನ್ದೂ ಸರಿಯಾಗುತ್ತೆ..... ಏಳ್ರೀ ...

**ಫಕೃದ್ದೀನ್** :- ದೋಸ್ತಿ ಅಂದ್ರೆ. ಹೀಗಿರ್ಬೇಕು ನೋಡಿ.... ಎಷ್ಟೊಂದು..... ಫೀಲ್ ಮಾಡ್ಕೊತಾ ಇದಾರೆ

**ನಟರಾಜ್** :- (ನಿಧಾನವಾಗಿ ಏಳುತ್ತಾ, ನೇಪಥ್ಯಕ್ಕೆ ಬಂದು) ಫೀಲಿಂಗೂ...... ಇಲ್ಲ.... ಪಿಂಡ್ವೂ ಇಲ್ಲ.... ನಾಟಕದೋರು .. ಒಬ್ಬೊಬ್ರಾಗಿ ಕಳ್ಚಿಕೊಳ್ತಾ ಇದಾರಲ್ಲ ಅಂತ ನನ್ನ ಯೋಚ್ನೆ.... ಇವ್ನು ದಾವಣಗೆರೆಗೆ

ಮ್ಯಾಚಿಗ್ಗ.... ಹೋಗ್ದೆ ಇದ್ರೆ ಯಾವ ದೇವ್ರು.... ಅಳ್ತಾ ಇದ್ನೋ.... ಕಾಣೆ.

ಮಹದೇವಪ್ಪ :— ಅಯ್ಯೋ... (ಕೋಪದಿಂದ) ನಿಮ್ಮನೆ ಕಾಯ್ಯಾಗ ನಾವೇನೋ ಫ್ರೆಂಡ್‌ಗೆ ಹೀಗಾಗಿದೆ.... ಅಂತ ಫೀಲ್ ಮಾಡ್ಕೋತಾ ಇದೀರಾ ಅಂತ ನಾವು..... ಅನ್ಕೊಂಡಿದ್ರೆ...... ನಾಟ್ಕವಂತೆ.... ನಾಟ್ಕ.....

ನಟರಾಜ್ :— ನಂಗೇನು ಫೀಲಿಂಗ್ಸ್... ಇಲ್ಲಾ ಅನ್ಕೊಂಡ್ರಾ ಸಾರ್ ? ಫೀಲಿಂಗೂ ಇದೆ... ಜೊತೆಗೆ ವರೀನೂ ಇದೆ ಆ ಭೀಮ್ರಾಯ್ರು .. ಸಾಗರಕ್ಕೆ ... ಈಗ ಹೊರಟೋದ್ರು.... ಇನ್ನು ಮೂರು ನಾಲ್ಕು ತಿಂಗ್ಳು ಬರೋಲ್ವಂತೆ. ಅವ್ರ ಭಾವಮೈದ್ನ ತೀರ್ಕೊಂಡ್‌ನಂತೆ.

ಶಂಕ್ರಪ್ಪ :— ಹೌದೇ...... ಅಯ್ಯೋ ಪಾಪ.... ಅಂತೂ ನಿಮ್ಮ ನಾಟ್ಕದ ಮೇಜರ್ ರೋಲೇ ಕೈಕೊಟ್ಟಾಗಾಯ್ತು.

ನಟರಾಜ್ :— ಅದೇನಪ್ಪಾ.... ನಾನ್ಹೇಳ್ತಿರೋದು.... ನಾಟ್ಕ ಮುಂದಿನ ವಾರ.... ಡೇಟ್ ಫಿಕ್ಸ್ ಆಗಿದೆ... ಸೀನ್ಸ್‌ಗೆ.... ಮೇಕಪ್‌ಗೆ, ರಾಮಮಂದಿರದ ಬಾಡ್ಗೆಗೆ.... ಎಲ್ಲಾದಕ್ಕೂ ಅಡ್ವಾನ್ಸ್ ಕೊಟ್ಟಾಗಿದೆ... ಆಗ್ಲೆ ಪ್ಯಾಂಪ್ಲೆಟ್ಸ್ ಪ್ರಿಂಟ್ ಮಾಡ್ಸಿ ಹಂಚಿದ್ದೂ ಆಗಿದೆ... ಎಲ್ಲಾ ನನ್ನ ಕರ್ಮ.

ಶಂಕ್ರಪ್ಪ :— (ಮಹದೇವಪ್ಪನವರ ಕಡೆ ತಿರುಗಿ) ಹೌದೂ ಸಾರ್.... ನಟರಾಜ್ ಹೇಳ್ತಿರೋದೆಲ್ಲಾ ನಿಜವೇ.... ಎಲ್ಲಾ ಏರ್ಪಾಡಾಗಿ.... ಪಾಪ.... ಸುಮಾರು ಎರ್ಡು ತಿಂಗ್ಳಿಂದ ಒದ್ದಾಡಿ.... ಈಗ ಹೀಗಾದ್ರೆ.... ಯಾರ್ಗೇ ಆಗ್ಲಿ ... ಬೇಜಾರಾಗಲ್ವೇ ?

ಫಕ್ರುದೀನ್ :— ಬೇಜಾರ್ ಕಾ ಬಾತ್ ಥೋಡೋ.... ಬಹೂತ್

ಅವಮಾನ್ ಭೀ ಆಗತ್ತೆ.

**ನಟರಾಜ್ :—** (ಮಹದೇವಪ್ಪನಿಗೆ) ಸಾರ್.... ನಂಗ್ಯಾಕೋ.... ಒಂಥರಾ ಆಗ್ತಿದೆ... ನಿಲ್ಲಕ್ಕೂ ಆಗ್ತಿಲ್ಲ.... ಹಾಫ್ ಡೇ ಲೀವ್ ಬೇಕು ಸಾರ್.... ನಾನು ಮನೇಗೆ ಹೋಗ್ತೀನಿ. ನಾಳೆ ಬಂದು ಲೀವ್ ಲೆಟರ್ ಬರ್ಕೊಡ್ತೀನಿ.. ನೀವು ಸ್ವಲ್ಪ ಸಾಹೇಬ್ರಿಗೆ.... ಹೇಳಿ....

**ಮಹದೇವಪ್ಪ :-** (ಸಮಾಧಾನ ಮಾಡುತ್ತಾ) ಆಯ್ತು.... ನೀವ್ಹೋಗಿ, ರೆಸ್ಟ್ ತೊಗೊಳ್ಳಿ. ನಾನು ಸಾಹೇಬ್ರಿಗೆ ಹೇಳ್ತೀನಿ...... ನಾವೆಲ್ಲಾ ಸಾಯಂಕಾಲ ಬಂದು... ನಿಮ್ಮನ್ನ ನೋಡ್ತೀವಿ. ಏನ್ಮಾಡೋದು ಅಂತ ಡಿಸೈಡ್ ಮಾಡೋಣ.

**ನಟರಾಜ್ :—** ಡಿಸೈಡ್ ಮಾಡೋಕೆ ಇನ್ನೇನ್ ಉಳ್ದಿದೆ ಸಾರ್? ಆಯ್ತು.. ಸಾಯಂಕಾಲ ಖಂಡಿತ ಬನ್ನಿ.... ನಾನೂ ಹಾಗೇ ಒಬ್ಬ ನಾಟ್ಕದ ಫ್ರೆಂಡ್ ವೆಂಕಣ್ಣ ಅಂತಿದಾರೆ.. ಅವರನ್ನ ನೋಡ್ಕೊಂಡು ರೂಮಿಗೆ ಹೋಗ್ತೀನಿ.... ಬರೋಣ್ವೇ ಸಾರ್.
(ನಟರಾಜ್ ನಿಧಾನವಾಗಿ ಹೊರ ಬೀಳುವನು)

**—: ತೆರೆ ಸರಿಯುವುದು :—**

# ದೃಶ್ಯ ೭

[ನಟರಾಜ್‌ನ ಕೊಠಡಿ. ನಟರಾಜ್ ತಲೆಗೆ ಮಫ್ಲರ್ ಸುತ್ತಿಕೊಂಡು ಜ್ವರ, ಛಳಿ ಬಂದು ನಡುಗುತ್ತಾ, ಒಬ್ಬನೇ ಜ್ವರದ ತಾಪದಿಂದ ಹುಚ್ಚು, ಹುಚ್ಚಾಗಿ ಮಾತಾಡಿಕೊಳ್ಳುತ್ತಿರುವನು]

**ನಟರಾಜ್ :—** (ನೇಪಥ್ಯಕ್ಕೆ ಬಂದು, ಗಡ ಗಡ ನಡುಗುತ್ತಾ) ಹ್ಹ... ಹ್ಹ.... ಇದ್ಯಾಕೆ.. ಇಷ್ಟು ಚಳಿ ಆಗ್ತಾ,

ಇದೆಯಲ್ಲ.... ಹ್ಹ.... ಹ್ಹ... ಎಲೆಲವೋ ದುರ್ಯೋಧನ.... ಇಂದಿಗೆ ನಿನ್ನ ಆಯಸ್ಸು ಮುಗಿಯಿತೆಂದು ತಿಳಿ.... ಹ್ಹ.... ಹ್ಹ.... (ನಡಗುವನು) 'ಮಾಯಾಮಯವೀ.... ಜೀವನ ಯೋಚಿಸೆ... ತೋಯುಜಾಕ್ಷನೆ.... ಉ.... ಪಾಯವತೋರ್ಕೈ.... ಪಾಯವತೋರ್ಕೈ'..... ಅವನೇನು .. ಉಪಾಯ ತೋರಿಸ್ತಾನೆ....ಎಲ್ಲಾ ಶುದ್ಧ ಯೂಸ್‌ಲೆಸ್ ಫೆಲೋಸ್..... ಅಲ್ಲ... ಈ ವೆಂಕಣ್ಣ.... ಕಳ್ಳ ನನ್ನ ಮಗ.... ಇಪ್ಪತ್ತು ರೂಪಾಯ್ನೂ... ಇಸ್ಕೊಂಡು.... ಸಾಯಂಕಾಲ ರೂಂ ಹತ್ರ ಬರ್ತೀನಿ ಅಂದೋನು.... ಪತ್ತೆ ಇಲ್ದೆ...... ಧಾರವಾಡಕ್ಕೆ ಹೊರಟುಹೋದ ಕಂಪ್ನೀಗೆ ಸೇರಕ್ಕೆ.... ನಾನೇನೋ ಅವ್ನ ಹತ್ರ.... ಒಂದು ಪಾರ್ಟ್ ಮಾಡ್ಲಿ.... ಇನ್ನೊಂದಕ್ಕೆ.... ಇನ್ಯಾರ್ನಾದ್ರೂ ಹೊಂಚಿಕೊಳ್ಳೋಣಾ ಅಂತಿದ್ರೆ...... ನನ್ನ ಹತ್ರ ಇಪ್ಪತ್ತು ರೂಪಾಯ್ನೂ ಕಿತ್ತು...... ಬೇರೆ ಊರಿಗೆ ಕಂಬಿ ಕಿತ್ತ ಎಲ್ರೂ ಮೋಸ.... ಅನ್‌ರಿಲಯಬಲ್ ನನ್ನ ನಾಟ್ಕ ನೆಗೆದುಬಿದ್ಹೋಯ್ತು... ಮಾನ ಮಣ್ಣು ಪಾಲಾಗಿ ಹೋಯ್ತು .. (ಹಣೆ ಮುಟ್ಟಿಕೊಂಡು) ಅಯ್ಯೋ...... ಏನಪ್ಪ... ಜ್ವರ ಹೀಗೆ ಹೊಡೀತಾ ಇದೆ... ಹ್ಹ... ಹ್ಹ... (ನಡುಗುತ್ತಾ ಹೋಗಿ ಕುರ್ಚಿಯ ಮೇಲೆ ಕೂಡುವನು)

ಹೊರಗಿನಿಂದ ಮಹದೇವಪ್ಪ, ಫಕ್ರುದ್ದೀನ್ ಮತ್ತು ಶಂಕ್ರಪ್ಪ ಒಬ್ಬೊಬ್ಬರಾಗಿ ಒಳಗೆ ಬರುವರು. ಇವರುಗಳ ಆಗಮನವನ್ನು ಗಮನಿಸದೆ ನಟರಾಜ್ ತನಗೆ ತಾನೇ ಮಾತಾಡಿಕೊಳ್ಳುವನು]

**ನಟರಾಜ್** :...... ಒಂದೇ.... ಒಂದು (ಕೈ ಬೆರಳು ತೋರಿಸುತ್ತಾ) ಒಂದೇ.... ಒಂದು ಒಳ್ಳೇ ನಾಟ್ಕ ಆಡ್ಬೇಕು.... ಗ್ರಾಂಡ್ ಸಕ್ಸಸ್ ಆಗಬೇಕು ಮಾಡೇ

ಮಾಡ್ತೀನಿ.... ಅದೇ.. ಆಡಿಸ್ತೀನಿ (ಹಾಡುವನು
'ಆಡಿಸಿದಳೆಶೋಧಾ ... ಜ ಗ ದೋ ( ಧಾ ರ ನ..
ಜಗದೋದ್ಧಾರನ .. ಹ್ಞ.... ಹ್ಞ..... (ನಡುಗುವನು

(ಅಷ್ಟರಲ್ಲೇ ಮಹದೇವಪ್ಪ ಓಡಿಬಂದು, ಹಣೆ ಮುಟ್ಟಿ ನೋಡುತ್ತಾ ಗಾಬರಿಯಾಗಿ)

**ಮಹದೇವಪ್ಪ :—** ಅಯ್ಯೋ.... ಇದೇನು ? ಕೆಂಡಾ ಮಂಡಲ ಜ್ವರ, .. ಮೈ ಬೆಂದ್ಹೋಗ್ತಾ ಇದೆಯಲ್ಲಾ.... ಛೇ.... ಛೇ.. ಅಯ್ಯೋ ಪಾಪ ಜ್ವರದ ತಾಪಕ್ಕೆ ... ಏನೇನೋ ಮಾತಾಡಿಕೊಳ್ತಿದಾರೆ (ಶಂಕ್ರಪ್ಪನ ಕಡೆ ತಿರುಗಿ ಬೇಗ ಹೋಗಿ..... ಯಾರ್‍ನಾದ್ರೂ ಡಾಕ್ಟರ್‍ನ ಕರ್ಕೊಂಡು ಬನ್ರಿ.

**ಫಕೃದ್ದೀನ್ :—** ಸಾರ್ ಬಾಜೂ ಘರ್‍ಮೆ.. ಒಬ್ರು .. ಡಾಕ್ಟ್ರು ಇದಾರೆ ಸಾರ್.

**ಮಹದೇವಪ್ಪ :—** ನೀವು..... ಸುಮ್ನಿರಿ . ಅವ್ರು ದನದ ಡಾಕ್ಟ್ರು . ರೀ ... ಶಂಕ್ರಪ್ಪ .. ನೀವು ಹೋಗ್ರಿ.

(ಶಂಕ್ರಪ್ಪನ ನಿರ್ಗಮನ, ಮಹದೇವಪ್ಪ ಅಲ್ಲೇ ಟೇಬಲ್ ಮೇಲೆ ಇಟ್ಟಿದ್ದ ಫ್ಲಾಸ್ಕನ ಕೈಗೆ ತೆಗೆದುಕೊಂಡು, ಫಕೃದ್ದೀನ್‌ಗೆ ಕೊಡುತ್ತಾ ರೀ.... ನೀವ್ಹೋಗಿ .. ಹತ್ತಿರದಲ್ಲೇ ಯಾವ್ದಾದ್ರೂ ಹೋಟೆಲ್ಗೆ ಹೋಗಿ ಕಾಫಿ ತೊಗೊಂಡು ಬನ್ನಿ.

(ಫಕೃದ್ದೀನ್ ಫ್ಲಾಸ್ಕ್ ತೆಗೆದುಕೊಂಡು ಹೋಗುವನು. ಮಹದೇವಪ್ಪ ನಟರಾಜ್ ಕಡೆ ತಿರುಗಿ)..... ಏನ್ರೀ..... ಏನಾರ್‍ರೂ ಮಾತ್ರೆ ತೊಗೊಳ್ಳೋ ವೇನ್ರೀ....

**ನಟರಾಜ್ :—** ಇಲ್ಲ ಸಾರ್.... ಎದ್ದು ಹೋಗೋಕ್ಕೆ ಆಗ್ತಿಲ್ಲ... ತುಂಬಾ ಚಳಿ ಆಗುತ್ತೆ ಸಾರ್.. ಏನು ಡಿಸೈಡ ಮಾಡಿದ್ರಿ ?

**ಮಹದೇವಪ್ಪ** ನಾಟ್ಕದ ಮನೆ ಹಾಳಾಯ್ತು .. ಮೊದ್ಲು ನೀವು ಹುಷಾರಾಗ್ರಿ......ನೀವೇನೂ ಯೋಚ್ನೆ ಮಾಡ್ಬೇಡಿ.... ನಾವೆಲ್ಲಾ ಸೇರಿ, ಈ ಊರಿನ ಲೋಕಲ್ ಪೇಪರ್‌ಗೆ "ಈ ತಿಂಗಳ 20ನೇ ತಾರೀಖು ಸೋಮವಾರ, ರಾಮ ಮಂದಿರದಲ್ಲಿ ನಡೆಯಬೇಕಾಗಿದ್ದ, 'ಮಿಡ್ಲ್ ಕ್ಲಾಸ್' ಎಂಬ ನಾಟಕವು, ಕಾರಣಾಂತರಗಳಿಂದ ನಡೆಯುವುದಿಲ್ಲ ಎಂದು ತಿಳಿಸಲು ವಿಷಾದಿಸುತ್ತೇವೆ.. ಇತಿ ವ್ಯವಸ್ಥಾಪಕರು" ಅಂತ ಅನೌನ್ಸ್ ಮಾಡೋದಕ್ಕೆ ಏರ್ಪಾಡು ಮಾಡಿದೀವಿ.... ಈವತ್ತು ಸಾಯಂಕಾಲದ ಇಷ್ಯೂಗೇ ಹಾಕ್ತೀವಿ ಅಂತ ಹೇಳಿದಾರೆ.

**ನಟರಾಜ್ :—** (ಎದ್ದು ನಿಲ್ಲುತ್ತಾ) ಅಯ್ಯೋ ನಾಟಕದ ನಟರಾಜ ... ಇಲ್ಲಿಗೆ ಬಂತೇ ನಿನ್ನ ಅವಸ್ಥೆ (ನಡುಗುತ್ತಾ ಕುರ್ಚಿಯಲ್ಲಿ ಕೂಡುವನು)

(ಮಹದೇವಪ್ಪ ಖಿನ್ನವದನರಾಗಿ ನಿಂತಿದ್ದಾರೆ ಅಷ್ಟರಲ್ಲಿ ಶಂಕ್ರಪ್ಪ, ಡಾಕ್ಟರ್ ಸಮೇತ ಬರುವರು. ಡಾಕ್ಟರ್ ಮೆಡಿಸನ್ ಬ್ಯಾಗನ್ ಟೇಬಲ್ ಮೇಲಿಟ್ಟು, ಸ್ಟೆಥಾಸ್ಕೋಪನ್ನು ಕಿವಿಗೆ ಹಾಕಿಕೊಂಡು ಮಹದೇವಪ್ಪನನ್ನು ಪರೀಕ್ಷಿಸಲು, ಹೋಗುವರು)

**ಶಂಕ್ರಪ್ಪ** ಅವ್ರಲ್ಲ ಸಾರ್ ಪೇಷೆಂಟು,..... ಅವ್ರು (ತೋರಿಸುತ್ತಾ) ಅಲ್ಲಿದ್ದಾರಲ್ಲ ಅವ್ರು.... ವಿಪರೀತ ಛಳಿ ಜ್ವರ ಬಂದಿದೆ ಸಾರ್.... ಸ್ವಲ್ಪ ಚೆನ್ನಾಗಿ ಪರೀಕ್ಷೆ ಮಾಡಿ, ಒಂದು ಒಳ್ಳೆ ಇಂಜಕ್ಷನ್ ಕೊಡಿ ಸಾರ್.

**ಡಾಕ್ಟರ್** ಒಳ್ಳೆ ಇಂಜಕ್ಷನ್ನೇ ?.... ನಾನೂಂದ್ರೆ ಏನು ?.... ಡಾ॥ ಧನವಂತ್ರಿ ... ಅಂದ್ರೇನು ?.... ಒಂದೇ ಒಂದು ಇಂಜಕ್ಷನ್ ಸಾಕು.

**ನಟರಾಜ್ :—** ಹೌದು .. ಹೌದು ... ಒಂದೇ ಒಂದು ನಾಟಕ ಒಂದೇ ಒಂದು...... ಒಂದು ನಾಟಕ....

**ಡಾಕ್ಟರ್ :—** ಹೌದು ಒಂದೇ ಒಂದು ಇಂಜಕ್ಷನ್ನೇ ಕೊಡೋದು. ಹಾ ಜ್ವರ ಹಾರಿ ಹೋಗುತ್ತೆ. ಎಲ್ಲಿ ಇಲ್ಬನ್ನಿ (ನಟರಾಜ್ ಬರುವನು. ಡಾಕ್ಟರ್ ಪರೀಕ್ಷಿಸಿ, ನಂತರ ಇಂಜಕ್ಷನ್ ನಟರಾಜ್ ರಟ್ಟೆಗೆ ಕೊಡುವರು)

**ನಟರಾಜ್ :—** (ರಟ್ಟೆ ಉಜ್ಜಿಕೊಳ್ಳುತ್ತಾ).... ಏನ್ಸಾರ್... ಇಷ್ಟು ನೋಯ್ತಾ ಇದೆ ?

**ಡಾಕ್ಟರ್ :—** ನೋಡಿ ರಾತ್ರಿ ಈ ಮಾತ್ರೆಗಳನ್ನು ತೊಗೊಳ್ಳಿ ... (ಒಂದು ಪೊಟ್ಟಣ ಕೊಡುವರು).... ಬೆಳಿಗ್ಗೆ ಎದ್ರೆ ಈ ಮಾತ್ರೆ ತೊಗೊಳ್ಳಿ (ಇನ್ನೊಂದು ಪೊಟ್ಟಣವನ್ನು ಕೊಡುವರು)

**ನಟರಾಜ್ :—** (ಗಾಭರಿಯಿಂದ) ಏನ್ಸಾರ್... ಹೀಗೆ 'ಬೆಳಿಗ್ಗೆ ಎದ್ರೆ' ಅಂತಿಹೇಳ್ತಿದ್ದೀರಲ್ಲಾ ಸಾರ್... ಹಾಗಾದ್ರೆ ಬೆಳಿಗ್ಗೆ ನಾನು (ಕೈ ಅಲ್ಲಾಡಿಸಿ ತೋರುತ್ತಾ) .. ಏಳೋದೇ ಇಲ್ವೆ ?

**ಡಾಕ್ಟರ್ :—** ಹಾಗಲ್ರೀ ಅದರ ಅರ್ಥ.... ಬೆಳಿಗ್ಗೆ ಎದ್ದ ಮೇಲೆ ಮಾತ್ರೆ ತೊಗೊಳ್ಳಿ ಅಂತ ನಾನ್ಹೇಳಿದ್ದು ..

**ನಟರಾಜ್ :..** ಡಾಕ್ಟ್ರೇ ... ನೀವು ಬಹಳ ... ಚೆನ್ನಾಗಿ ಮಾತಾಡ್ತೀರಾ.... ನಾಟಕದಲ್ಲಿ ಪಾರ್ಟ್ ಮಾಡಿ ಅಭ್ಯಾಸ ಇದೇ ಅಂತ ಕಾಣುತ್ತೆ.... ಸಾರ್ (ದೀನನಾಗಿ)...... ದಯವಿಟ್ಟು.... ನಮ್ಮ ನಾಟ್ಕದಲ್ಲಿ.... ಒಂದು ಪಾರ್ಟ್ ತೊಗೊಳ್ಳಿ ಸಾರ್ ... ನಾಟ್ಕ ಕ್ಯಾನ್ಸಲ್ ಆಗೋ ಸ್ಟೇಜ್‌ಗೆ ಬಂದಿದೆ ... (ಡಾಕ್ಟರ್ ಗಾಭರಿಯಿಂದ ಮಹದೇವಪ್ಪನ ಕಡೆ ನೋಡುವರು)

**ಶಂಕ್ರಪ್ಪ :—** ನೋಡಿ ಡಾಕ್ಟ್ರೇ.... ಆಗ್ಲಿಂದ.... ಹೀಗೆ ಅಸಂಭದ್ಧ

ವಾಗಿ ಮಾತಾಡ್ತಾನೇ ಇದಾರೆ.

**ಡಾಕ್ಟರ್ :—** ಡೋಂಟ್ ವರಿ ಮಾಡ್ಕೋಬೇಡಿ... ಹಿ ವಿಲ್ ಬಿ ಆಲ್ ರೈಟ್ ಬೈ ಟುಮಾರೋ .. ಜ್ವರದ ತಾಪಕ್ಕೆ ಹಾಗೆ ಮಾತಾಡ್ತಾರೆ ಅಷ್ಟೆ....ನಾನಿನ್ನು ಬರ್‍ತೀನಿ ..

**ಮಹದೇವಪ್ಪ :—** ಶಂಕ್ರಪ್ಪ...... ನೀನು ಹೋಗಿ ಡಾಕ್ಟರ್‌ನ ಬಿಟ್ಟು.... ಹಾಗೇ...... ಅವ್ರ ಫೀಸ್ ಕೊಟ್ಟು ಬಾ (ಡಾಕ್ಟರ್ ಕಡೆ ತಿರುಗಿ (ಬಹಳ.... ಥ್ಯಾಂಕ್ಸ್ ಸಾರ್.
[ಶಂಕ್ರಪ್ಪ ಮತ್ತು ಡಾಕ್ಟರ್ ಅವರ ನಿಷ್ಕ್ರಮಣ]

**ನಟರಾಜ್ :** (ಮಹದೇವಪ್ಪನಿಗೆ) ಸಾರ್....ಒಂದ್ಲೋಟ ಕಾಫಿ..... ತರ್‍ಸಿಕೊಡ್ತೀರಾ ?

**ಮಹದೇವಪ್ಪ :—** ಫಕ್ರುದ್ದೀನ್‌ನ ಕಳ್ಸಿದೀನಿ.... ಇನ್ನೇನು ತಂದ್ಬಿಡ್ತಾನೆ (ಹೊರಗಡೆಯಿಂದ ಫಕ್ರುದ್ದೀನ್ ಪ್ರವೇಶಿಸುವನು).... ಹೋ ಬಂದೇ ಬಿಟ್ರು.... ಕಾಫಿ ತಂದ್ರಾ ?

**ಫಕ್ರುದ್ದೀನ್ :—** ತಂದಿದ್ದೆ.. ಇಲ್ಲೇ.... ಬಾಗ್ಲಾಗೆ...... ಫ್ಲಾಸ್ಕ್ ಜಾರಿ ಬಿದ್ದು ಟೂಟ್‌ಗಯಾ.... ಕಾ ಫೀ ಬೀ.... ಚಲ್ಹೋಯ್ತು.

**ನಟರಾಜ್ :—** (ಬೇಸರದಿಂದ ನಿಧಾನವಾಗಿ ಎದ್ದು ನೇಪಥ್ಯಕ್ಕೆ ಬಂದು) .. ಅಯ್ಯೋ...... ನತದೃಷ್ಟ.... ನಾಟಕದ ನಟರಾಜ.... ಎಲ್ಲಾದ್ರಲ್ಲೂ...... ನಿಂದು.... ಹೀನ ಅದೃಷ್ಟವೇ ಆಯ್ತಲ್ಲೋ.... ಕಾ ಫಿ ನಾ ದ್ರೂ ಕುಡ್ಕೋಣಾ ಅಂದ್ರೆ.... ಕಾಫೀನೂ ಹೋಯ್ತು...... ಹೊಸ್ದಾಗಿ ತಂದ ಫ್ಲಾಸ್ಕೂ ಒಡ್ದೋಯ್ತು...... ಹೆಜ್ಜೆ... ಹೆಜ್ಜೆಗೂ....ಫೈಲ್ಯೂರೇ....

(ಅಷ್ಟು ಹೊತ್ತಿಗೆ ಸರಿಯಾಗಿ, ಈವ್‌ನಿಂಗ್ ನ್ಯೂಸ್ ಪೇಪರನ್ನು, ಪೇಪರ್ ಬಾಯ್, ಬೆಲ್ ಮಾಡಿ, ಪೇಪರನ್ನು ಒಳಗೆ ಎಸೆಯುವನು. ಮಹ

ದೇವಪ್ಪ ತೆಗೆದುಕೊಂಡು ತಿರುವಿ ಹಾಕಿ)

**ಮಹದೇವಪ್ಪ :—** ಓಹೋ.... ನೋಡಿ ನಟರಾಜ್.... ಆಗ್ಲೆ ಪೇಪರ್ ನಲ್ಲೂ ಬಂದ್ಬಿಟ್ಟದೆ.... ಓದ್ತೀನಿ ಕೇಳಿ (ಓದುವರು) "ಕಲಾಭಿಮಾನಿಗಳ ಗಮನಕ್ಕೆ.... ಇದೇ ತಿಂಗಳು ತಾರೀಖು ಇಪ್ಪತ್ತರ, ಸೋಮವಾರ, ಸಾಯಂಕಾಲ ಸರಿಯಾಗಿ ಏಳು ಗಂಟೆಗೆ, ಈ ಊರಿನ ಶ್ರೀರಾಮ ಮಂದಿರದಲ್ಲಿ, ಶ್ರೀಮಾನ್ ನ ಟ ರಾ ಜ್ ಮಿತ್ರ ಮಂಡಲಿಯವರಿಂದ, ನಡೆಯ ಬೇ ಕಾ ಗಿ ದ್ದ **"ಮಿಡ್ಲ್ ಕ್ಲಾ ಸ್"** ಎಂಬ ನಗೆ ನಾ ಟ ಕ ವು, ಕಾರಣಾಂತರಗಳಿಂದ ರದ್ದಾಗಿದೆ ಎಂದು ತಿಳಿಸಲು ವಿಷಾದಿಸುತ್ತೇವೆ.

ಇತಿ, ವ್ಯವಸ್ಥಾಪಕರು.

ಇನ್ನು ನಿಶ್ಚಿಂತರಾಗಿರಿ, ನಾಟ್ಕ ನಿಲ್ತೂಂತ ಎಲ್ರಿಗೂ ತಿಳ್ಯುತ್ತೇ.... ಇನ್ನಾದ್ರೂ ಆರಾಮವಾಗಿರಿ....

**ನಟರಾಜ್ :—** (ತಕ್ಷಣ, ಮಹದೇವಪ್ಪನಿಂದ, ಪೇಪರ್ ಕಿತ್ತುಕೊಂಡು ಪರಪರನೆ ಹರಿದು, ಮೇಲಿನಿಂದ ತೂರಿ ಬಿಡುತ್ತಾ, ಖಿನ್ನವದನನಾಗಿ)

ಸಾಕಪ್ಪಾ.. ಸಾಕು.... ಇನ್ನು ಜನ್ಮೇಪಿ ನಾಟ್ಕಕ್ಕೆ ಕೈ ಹಾಕ್ಬಾರ್ದು....ಈ ನಾಟಕ.... ಗೀಳೂ ಸಾಕು.... ಈ ಗೀಳಿನ ಗೋಳೂ ಸಾಕು (ತಲೆಯ ಮೇಲೆ ಕೈ ಹೊತ್ತು ನಿಲ್ಲುವನು)

[ಅಂಕದ ಪರದೆ ನಿಧಾನವಾಗಿ ಸರಿಯುವುದು]

— ಸ ಮಾ ಪ್ತಿ —

